


ಫೆಬ್ರವರಿ-ಮಾರ್ಚಿ — 1989

# ಸಿದ್ಧಗಂಗಾ



'ಸಿದ್ಧಗಂಗಾ ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರಬಳಗ.

ಸರ್ವಶ್ರೀ :-

1273 ಎಸ್. ಚನ್ನಬಸವಯ್ಯ, ನಂ. 668/10, 5 ನೇ ಬ್ಲಾಕ್, 61 ಕ್ರಾಸ್ ರಾಜಾಜಿನಗರ, ಬೆಂಗಳೂರು-10

1274 ಎಸ್. ಚನ್ನಬಸಪ್ಪ, ಕಾಮಧೇನು ಮೈನ್‌ಸ್ಕೂಲ್, ಕಾರ್‌ಬೀದಿ, ಬಳ್ಳಾರಿ.

1275 ಶ್ರೀಮತಿ ಅಕ್ಕಮಹಾದೇವಿ ಬಸವಲಿಂಗಪ್ಪ, ಮಮತಾ ಪುಟ್ಟಣಶೆಟ್ಟರು ಬಂಕೆಪುರ ಮತ್ತು ಅಂಚೆ, ಶಿಗ್ಗಾವಿ ತಾಲ್ಲೂಕು ಧಾರವಾಡ ಜಿಲ್ಲಾ

1276 ರೇವಣ್ಣಸಿದ್ಧಪ್ಪ, ನಿವೃತ್ತಉಪಾಧ್ಯಾಯರು, ಬ್ಯಾಲಕೆರೆ ಮತ್ತು ಅಂಚೆ ಮಾಗಡಿ ತಾಲ್ಲೂಕು

1277 ಪಿ. ರಾಜಶೇಖರಪ್ಪ, ಶಿಕ್ಷಕರು. ಪುರ, ನಿಟ್ಟೂರು ಅಂಚೆ, ಗುಬ್ಬಿ ತಾ||

1278 ಬಿ. ಎನ್. ಸಿದ್ಧಲಿಂಗಯ್ಯ S/o ಶ್ರೀ ನಾಗರಾಜಪ್ಪ, ಬಿಟ್ಟಸಂದ್ರ, ಎಣ್ಣೆ-ಗೆರೆ ಅಂಚೆ, ಮಾಗಡಿ ತಾಲ್ಲೂಕು-

1279 ಎಂ. ಸಿ. ಪುಟ್ಟರಾಜು S/o ಎಂ. ಎಸ್. ಚನ್ನವೀರಯ್ಯ, ನಂ. 58, 3 ನೇ ಬ್ಲಾಕ್ ಪೂರ್ವ ಜಯನಗರ, ಬೆಂಗಳೂರು-11

1280 ಎಸ್. ಪರಮೇಶ್ವರ S/o ಸಿ. ಸಿದ್ಧಲಿಂಗಯ್ಯ, ನಂ. 35, 'ಎ' ಬ್ಲಾಕ್ ಅಗ್ರಹಾರ, ದಾಸರಹಳ್ಳಿ, ಮಾಗಡಿ ರಸ್ತೆ, ಬೆಂಗಳೂರು-23

1281 ಶ್ರೀಮತಿ ನರಸಮ್ಮ ನೀಲಕಂಠಪ್ಪ ಕಾಫಿ ಪ್ಲಾಂಟ್, ವೇಗೂರು ಮತ್ತು ಅಂಚೆ, ಸಕಲೇಶ್‌ಪುರ ತಾಲ್ಲೂಕು.

1282 ಡಿ. ನಾಗಣ ಗೌಡ, ಗ್ರಾಮಲೆಕ್ಕಿಗರು, ಸಿಂಧುವಾಳ ಅಂಚೆ ಬಳ್ಳಾರಿ

1283 ಶಿವರುದ್ರಪ್ಪ, ಕನ್ನಸಂದ್ರ, ಲಕ್ಕೇನಹಳ್ಳಿ ಅಂಚೆ ಮಾಗಡಿ ತಾಲ್ಲೂಕು

1284 ಶಿವಣ್ಣ, ಶಿಕ್ಷಕರು, ಕುರುಡಿ-ಅಂಚೆ, ಗೌರಿಬಿದನೂರು ತಾಲ್ಲೂಕು

1285 ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಪಾಠಶಾಲೆ, ಹುಣಸಗಿ-ಅಂಚೆ, ಸುಗಪುರ ತಾಲ್ಲೂಕು ಗುಲ್ಬರ್ಗ ಜಿಲ್ಲೆ

# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೨-೩ ಫೆಬ್ರವರಿ-ಮಾರ್ಚಿ ೧೯೮೯

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹರಿವ ನದಿಯಾಗಿರು ಅರಳುವ ಹೂವಾಗು
ಗರಿಗೆದರಿ ಹಾರುವ ಗರುಡನಾಗು। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಶರಣರ ಚರಿತವ ಅರಿವಿನಿಂದೋದು ನೀ
ಗುರಿ ನಿನಗೆ ಕಾಣುವುದು ತೆರೆದು ತಾನು। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಇಷ್ಟಲಿಂಗದ ಪೂಜೆನಿಷ್ಠೆಯಿಂ ನೀ ಮಾಡು
ಕಷ್ಟಕಾರ್ಪಣ್ಯಗಳು ಹರಿವುವು। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಒಳ ಪುಟಗಳಲ್ಲಿ



# ಶ್ರೀವಾಣಿ

## ಜೀವಿತದ ರಹಸ್ಯ



ತುಂಬು ಜೀವನದ ತತ್ವ ಅಡಗಿರುವುದು ಲೌಕಿಕ ಪಾರಮಾರ್ಥಿಕ, ರಾಜಕೀಯಗಳ ಹೊಂದಾಣಿಕೆಯಲ್ಲಿ. ಇವು ಒಂದನ್ನು ಬಿಟ್ಟು ಇನ್ನೊಂದು ಇಲ್ಲ. ಇವು ಪ್ರಾಚೀನ ಭಾರತೀಯರಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿದ್ದವು. ಇಂದು ಇವುಗಳಲ್ಲಿ ಹೊಂದಾಣಿಕೆ ಇಲ್ಲದ ಜೀವನ ನಮ್ಮದಾಗಿದೆ. ನಾವು ನಮ್ಮ ಹಿಂದಿನ ದಿವ್ಯಾದರ್ಶಗಳನ್ನು ಮೂಲೆಗೆ ತಳ್ಳುತ್ತಾ ನಡೆದಿದ್ದೇವೆ. ನಾವು ವಿಜ್ಞಾನವನ್ನು ಕಲಿಯೋಣ. ಜೊತೆಗೆ ನಮ್ಮವರ ಸಂಸ್ಕೃತಿಯ ಸಮಗ್ರತೆಯನ್ನು ಅಭ್ಯಾಸ ಮಾಡೋಣ. ಸಾಹಸದಿಂದ ಸಾಧಿಸಬೇಕಾದ ಜೀವನ ಮೌಲ್ಯಗಳನ್ನು ಸಾಧಿಸೋಣ. ಜ್ಞಾನಾರ್ಜನೆ ಆರ್ಜಿಸಿದ, ಜ್ಞಾನವನ್ನು ಕ್ರಿಯಾಮುಖಗೊಳಿಸುವ ಸಾಧನೆ ಇವು. ತಪ್ಪಿದುವೆಂದರೆ ಜೀವನವೇ ಅಸ್ತವ್ಯಸ್ತ. ಆಗ ಪುನಃ ನಾವು ಗೊಂದಲದ ಜೀವನದಲ್ಲಿ ಮುಳುಗಬೇಕಾಗುತ್ತದೆ. ಹೃದಯ ದೌರ್ಬಲ್ಯವನ್ನು ಕಿತ್ತೆಸೆದು ಆಧ್ಯಾತ್ಮಿಕ ಸಂಪತ್ತಿನಿಂದುಂಟಾಗುವ ಸಹಜಧೈರ್ಯ ಸಂಪನ್ನರಾಗಿ ಮುಂದುವರೆಯುವುದರಲ್ಲಿಯೇ ತುಂಬು ಜೀವನದ ರಹಸ್ಯ ಅಡಗಿದೆ. ಅಧ್ಯಾತ್ಮಿಕ ಪ್ರವೃತ್ತಿ ಎಂದರೆ ಜಗತ್ತನ್ನು ಬಿಟ್ಟ ಬೇರೆ ರೀತಿಯಲ್ಲಿ ಬಾಳಬೇಕೆಂಬುದಲ್ಲ. ಅದು ರಾಜಕೀಯ, ಆಧಿಕ ನೈತಿಕ ಹೊಣೆಗಾರಿಕೆಗಳನೆಲ್ಲಾ ಸುತ್ತು ಹಾಕಿಕೊಂಡಿದೆ. ಸರ್ವಸಂಗ ಪರಿತ್ಯಾಗಿಗಳೆನಿಸಿದವರು ಲೌಕಿಕವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅದರ ಉತ್ಕರ್ಷಕ್ಕೆ ಹೆಣಗಿದ್ದಾರೆ. ಕಾಳಿದಾಸನ ಶಾಕುಂತಲದಲ್ಲಿ ಕಣ್ವರು "ಆರಣ್ಯಾಕಸೋಪಿ ಲೌಕಿಕಜ್ಞಾವಯಂ" ಎಂದು ಹೇಳಿರುವ ಮಾತು ಗಮನಾರ್ಹ.

ಈ ಲೋಕದಲ್ಲಿ ವ್ಯಕ್ತಿ ದೊಡ್ಡವನಾಗಬೇಕಾದರೆ, ಅಂತರಿಕ ಸೌಂದರ್ಯ ಬೆಳೆಯಬೇಕು. ಮನಸ್ಸಿನ ಮೂಲಗುಣವನ್ನು ಹುರಿದು, ಅದು ಉದಾತ್ತ ಯೋಚನೆಯನ್ನು ಮಾಡುವಂತೆ ಮಾಡಬೇಕು. ಅದಕ್ಕೆ ಮೆಲ್ಲ ಮೆಲ್ಲನೆ ಮುದ್ದು ನುಡಿ ಕಲಿಸಬೇಕು. ಮನಸ್ಸನ್ನು ಧ್ಯಾನಾಭಿಮುಖಗೊಳಿಸಬೇಕು. ಅದರ ಸಮಗ್ರ ದಿಕ್ಕುಗಳಿಗೆ ಹರಿಯುವ ಹರಿತವನ್ನು ವ್ಯವಸ್ಥೆಗೊಳಿಸಿಕೊಳ್ಳಬೇಕು. ನಮಗೆ ಸುಖವನ್ನು ದುಃಖವನ್ನು ತಂದುಕೊಳ್ಳುವವರು ನಾವೇ. ಇದೆಲ್ಲಕ್ಕೆ ನಮ್ಮ ಮನಸ್ಸೇ ಕಾರಣ. ಮನಸ್ಸಿನ ಮೇಲೆ ಜಯ ಸಾಧಿಸಿದವನು ಪುರುಷಾರ್ಥಗಳನ್ನು ಸಾಧಿಸಲರ್ಹನಾಗುತ್ತಾನೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪ್ರವಹ; ಮೇಲಾಗಿ ಶ್ರೀಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ, ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ, ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.



# ಸಂಪಾದಕೀಯ

## ಕನ್ನಡ ಸಾಹಿತ್ಯ ಪರಿಷತ್

ಇತ್ತೀಚಿನ ವರ್ಷಗಳಲ್ಲಿ ವಾದ ವಿವಾದದ ಕಣವಾದ ಸಾಹಿತ್ಯ ಪರಿಷತ್ತು ಇದೀಗ " ದುಸ್ವಪ್ನದಿಂದ ಪಾರಾಗಿದೆ ". ಚುನಾವಣೆ ನಡೆದು ನೂತನ ಅಧ್ಯಕ್ಷರ ಆಯ್ಕೆಯಾದದ್ದು ಸಾಹಿತ್ಯ ಪರಿಷತ್ತಿನೊಂದಿಗೆ ಸಂಬಂಧವಿರಿಸಿಕೊಂಡು ಬಂದಿದ್ದ- ವರಿಗಷ್ಟೇ ಅಲ್ಲದೆ ಕನ್ನಡಿಗರೆಲ್ಲರಿಗೆ ಸಂತೋಷವನ್ನುಂಟುಮಾಡಿದೆ. ಆಯ್ಕೆಯಾಗಿರುವ ಅಧ್ಯಕ್ಷರಾದ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯನವರ ಬಗ್ಗೆ ವ್ಯಕ್ತವಾಗಿರುವ ಅಭಿಮಾನ ಪ್ರೀತಿ ವಿಶ್ವಾಸಗಳಂತೂ ವಿದ್ವತ್ತು ಮತ್ತು ದಕ್ಷತೆಗಳಿಗೇ ದೊರೆತಂತಾಗಿದೆ. ಚುನಾವಣಾ ಪೂರ್ವ ಮತ್ತು ಅನಂತರದಲ್ಲಿ ಸಿದ್ಧಲಿಂಗಯ್ಯನವರು ನಡೆದುಕೊಂಡ ರೀತಿ ರಿವಾಜಗಳು ಪ್ರಜಾ ಪ್ರಭುತ್ವದಲ್ಲಿ ನಂಬಿಕೆಯಿರುವ ವಿ ಚಾ ರ ಶೀ ಲ ರೆ ಲ್ಲ ಅನುಸರಿಸುವ ಹೆದ್ದಾರಿಯಾಗಿದೆ. ಯಾವ ಪೂರ್ವಗ್ರಹಪೀಡೆಯೂ ಇಲ್ಲದ ಮುಕ್ತ- ವಾತಾವರಣವನ್ನು ದೃಷ್ಟಿಸುವ ಪ್ರಯತ್ನ ನೂತನ ಅಧ್ಯಕ್ಷರ ಸಂದರ್ಶನ, ಪತ್ರಿಕೆ ಹೇಳಿಕೆಗಳಿಂದ ಪ್ರಕಟವಾಗಿದೆ. " ಜನತಾ ವಿಶ್ವ ವಿದ್ಯಾಲಯ, " " ಸರಸ್ವತಿಯ ದೇಗುಲ " ಎಂದೆಲ್ಲಾ ಹೆಸರಾದ ಪರಿಷತ್ತನ್ನು ರೋಗ ಮುಕ್ತ ಗೊಳಿಸಿ " ಕನ್ನಡ ಸಂಸ್ಕೃತಿಯ ಕೇಂದ್ರ "ವನ್ನಾಗಿಸುವ ಜಿ.ಎಸ್.ಎಸ್.ರವರ ಅದಮ್ಯ ಅಭೀಪ್ಸೆಗೆ ಕನ್ನಡಿಗರೆಲ್ಲರ ಸಹಕಾರಕೊಡಿ ಬರಬೇಕಾಗಿದೆ. ಸರ್ಕಾರ, ಸಂಘ, ಸಂಸ್ಥೆಗಳ ಸಹಯೋಗ ದೊರಕಬೇಕಾಗಿದೆ. ಸ್ವಾಯತ್ತ ಸಂಸ್ಥೆಯನ್ನಾಗಿ ಕಟ್ಟಬೇಕೆಂಬ ಸಂಕಲ್ಪ, ಸಂಘಟನೆಯ ಮಂಟಪವಾಗಿಸಬೇಕೆಂಬ ಮಣಿಹಕ್ಕೆ ಅರ್ಪಿಸಿಕೊಳ್ಳುವ ಚಿಂತನ ನಡೆಸಿರುವ ಅಧ್ಯಕ್ಷ ಸಿದ್ಧಲಿಂಗಯ್ಯನವರದು ಕ್ರಿಯಾ- ಶೀಲ ವ್ಯಕ್ತಿತ್ವ. ತೆರದ ಮನಸ್ಸಿನ, ಸಾಹಸ ಪ್ರವೃತ್ತಿಯ ಹಾಗೂ ಮಾನವೀಯ ಸಂಬಂಧಗಳಲ್ಲಿ ಅಪಾರ ವಿಶ್ವಾಸವಿರಿಸಿಕೊಂಡಿರುವ ಹೃದಯವಂತರು. ವಿದ್ಯಾರ್ಥಿ- ದೆಸೆಯಿಂದಲೂ ಪ್ರತಿಭಾವಂತರಾಗಿಯೇ ಬೆಳೆದು ಬಂದ ಸಿದ್ಧಲಿಂಗಯ್ಯನವರು ಸಮರ್ಥ ಅಧ್ಯಾಪಕರಾಗಿ ಲಕ್ಷಾಂತರ ವಿದ್ಯಾರ್ಥಿಗಳನ್ನು ರೂಪಿಸಿದ್ದಾರೆ. ಅವರು ಮಾಡಲಾಶಿಸಿರುವ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಆ ವಿದ್ಯಾರ್ಥಿ ಸಮೂಹ ಸಹಕಾರ ಹಸ್ತ ನೀಡುವಲ್ಲಿ ಅನುಮಾನವಿಲ್ಲ. ಜೊತೆಗೆ ಗೆಳೆಯರ, ಹಿತೈಷಿಗಳ, ಹಿರಿಯರ. ಯೋಗ್ಯ ಸಲಹೆ ಸಹಕಾರಗಳೂ ಒದಗಿಬರುವುದು ಸಹಜವೇ ಆಗಿದೆ. " ಹಳೆ-

ಬೇರು ಹೊಸಚಿಗುರು ಸಮ ಸಮವಾಗಿ ಒಡಗೂಡವ, ಒಡನಾಡುವ ಸಾಮರಸ್ಯದ ವಾತಾವರಣ ಸೃಷ್ಟಿಯಾಗುವಂತೆ ಶ್ರಮಿಸುವಲ್ಲಿ ಮುಂದೆ ನಡೆದಿದ್ದಾರೆ. " ನಾನು-ವಿಳಾಸದ ಪಟ್ಟಹಿಡಿದು ಕೊಂಡು ಸಾಹಿತಿ ಕಲಾವಿದರ ಮನೆ ಮನೆಗೂ ಹೋಗುತ್ತೇನೆ" ಎಂದು ನುಡಿದಿದ್ದಾರೆ. ಸಿದ್ದಲಿಂಗಯ್ಯನವರದು ಎಲ್ಲ ನೇರ. ಸ್ಪಷ್ಟವಾದ ಮಾರ್ಗ. ಜಿಲ್ಲಾ ಸಾಹಿತ್ಯ ಭವನ ನಿರ್ಮಾಣ, ಸುಸಜ್ಜಿತ ಗ್ರಂಥ ಭಂಡಾರ, ಸಾಹಿತ್ಯವಿಚಾರ ಸಂಕಿರಣಗಳು, ಸಾಹಿತ್ಯ ಸಮ್ಮೇಳನ, ವಸಂತೋತ್ಸವ, ಗ್ರಂಥ ಪ್ರಕಟಣೆ ಇವೆಲ್ಲ ಅಧ್ಯಕ್ಷರು ಹಮ್ಮಿಕೊಂಡಿರುವ ಕಾರ್ಯಕ್ರಮಗಳು. ಕಣ್ತುಂಬಕನಸುಗಳು, ಕಾರ್ಯಗತವಾಗಿಸಬೇಕೆಂಬ ಆತ್ಮಸಂಕಲ್ಪ, ವಿವಿಧ ಮೂಲಗಳಿಂದ ಆರ್ಥಿಕ ಹಾಗೂ ಶ್ರಮದ ನೆರವು ಪಡೆಯುವ ಯೋಜನೆಗಳಿದ್ದರೂ ಯಾವ ಪ್ರಭಾವಕ್ಕೂ ಮಣಿಯ ಲಾರದ ಮನೋಸ್ಥೈರ್ಯ. ಪರಿಷತ್ತಿನ ಮುಂದೆ ಯಾರು ದೊಡ್ಡವರಲ್ಲ, ಪರಿಷತ್ತಿನ ಗೌರವ ದೊಡ್ಡದು ಎಂಬ ಭಾವನೆ ಸಿದ್ಧಲಿಂಗಯ್ಯನವರ ನಿಸ್ಪೃಹತೆಗೆ ಸಾಕ್ಷಿ. ವಿನಯಕ್ಕೆ ನಿದರ್ಶನ, "ಕನ್ನಡ ಜನತೆ ನನ್ನಲ್ಲಿ ತೋರಿಸುತ್ತಿರುವ ವಿಶ್ವಾಸ ಭಂಗವಾಗದಂತೆ ನಾನು ನಡೆದು ಕೊಳ್ಳಬೇಕು. ಹಾಗೆ ನಡೆದುಕೊಳ್ಳ ಬಲ್ಲೆನೆಂಬ ವಿಶ್ವಾಸನನ್ನದು. ಸಾಧ್ಯವಾಗದಿದ್ದ ಕ್ಷಣದಲ್ಲಿಯೇ ಪರಿಷತ್ತಿನಲ್ಲಿ ನಾನು ಇರುವುದಿಲ್ಲ" –ಎಂದಿರುವ ಅವರ ಮಾತುಗಳು ತತ್ವನಿಷ್ಠ ಪ್ರಾಮಾಣಿಕರೊಬ್ಬರನ್ನು ಸಾಹಿತ್ಯಪರಿಷತ್ತು ತನ್ನ ಪ್ರೀತಿಯ ಹಸ್ತದಿಂದೆತ್ತಿಕೊಂಡು ಹೊಸ ಅಧ್ಯಾಯತೆರೆಯಲಾರಂಭಿಸಿದೆ ಎಂಬ ಆಶೆ ಮೂಡುತ್ತದೆ, "ಕನ್ನಡದ ಜೋಳಿಗೆ" ಹಿಡಿದು 'ಅಮೃತನಿಧಿ' ಗೆ ಹಣಸಂಗ್ರಹಣೆಗೆ ಅಧ್ಯಕ್ಷರು ಹೊರಟಾಗ ನಾಲ್ಕು ಕೋಟಿ ಕನ್ನಡಿಗರ ಉದಾರ ಹಸ್ತಗಳು ಮುಕ್ತವಾಗಿ ಸಹಕರಿಸುವಂತಾಗಲಿ-ಮಠ, ಮಾನ್ಯಗಳು, ಸಂಘಸಂಸ್ಥೆಗಳು, ಉದ್ಯಮಪತಿಗಳು, ಪ್ರೋತ್ಸಾಹ ನೀಡಲಿ-ಎಂದು ಕೋರುತ್ತದೆ ಸಿದ್ಧಗಂಗಾ.

ತುಮಕೂರಿನವರಾದ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಅಂಗವಾದ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ಹೆಮ್ಮೆಯ ವಿದ್ಯಾರ್ಥಿ ಎಂಬುದನ್ನು ಸ್ಮರಿಸುತ್ತ ನೂತನ ಅಧ್ಯಕ್ಷರಿಗೆ, ತುಂಬುಹೃದಯದ ಅಭಿನಂದನೆಗಳನು ಸಲ್ಲಿಸುತ್ತದೆ, ಸಿದ್ಧಗಂಗಾ.



## ಮಾಣಿಕ್ಯ ದೀಪ್ತಿ

### ವಿಶ್ವಕುಟುಂಬಿಯ ನಾಡ ಭವಿಷ್ಯದ ಚಿಂತೆ !

– ಶ್ರೀ ಟಿ.ಆರ್. ಮಹಾದೇವಯ್ಯ, ಬೆಂಗಳೂರು.

15. 3. 1989 ರ ಸಂಜೆ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳನ್ನು ಬೆಂಗಳೂರಿನ ಕಾರ್ಯಕ್ರಮವೊಂದಕ್ಕೆ ಆಹ್ವಾನಿಸಲು ಹೋಗಿದ್ದೆ. ನಾನು ಹೋದಾಗ ಸಂಜೆಯ ಪ್ರಾರ್ಥನಾ ಸಮಯ. ಆರ್ಷೇಯವಾದ ಗುರುಕುಲವನ್ನು ಕಣ್ಣೆದುರು ತಂದು ನಿಲ್ಲಿಸುವ ಪವಿತ್ರವಾತವರಣ. ಅದರಲ್ಲಿ ಭಾಗಿಯಾಗುವ ಸೌಭಾಗ್ಯ ನನಗೆ ಒದಗಿತೆಂದು ಹಿಗ್ಗಿದೆ. ವಿದ್ಯಾರ್ಥಿಗಳು ಸಮಸ್ತ್ರದಲ್ಲಿ ಬಂದು ನೆರೆದರು, ಪೂಜ್ಯರು ಬಂದು ಆಸೀನರಾದ ನಂತರ ಎಲ್ಲರೂ ಪದ್ಧತಿಯಂತೆ ಸಂಸ್ಕೃತ ಶ್ಲೋಕಗಳನ್ನು, ಶರಣರ ವಚನಗಳನ್ನು ಹಾಡುಗಳನ್ನು ಒಕ್ಕೊರಲಿನಿಂದ ಹಾಡಿದರು. ಓಘತಪ್ಪಿದ ಕಡೆ ಅಧ್ಯಾಪಕರೊಬ್ಬರು ದನಿಗೂಡಿಸಿ ಸರಿಪಡಿಸುತ್ತಿದ್ದರು.

ಪ್ರಾರ್ಥನಾ ನಂತರ ಪೂಜ್ಯರು ವಿಧ್ಯಾರ್ಥಿಗಳನ್ನುದ್ದೇಶಿಸಿ ಕೆಲವು ಹಿತವಚನಗಳನ್ನು ಹೇಳುವುದರ ಪರಿಪಾಠ. ಆದಿನ ಅವರು ನುಡಿದ ಕೆಲವೇ ಮಾತುಗಳಾದರೂ ಅತ್ಯಂತ ಹೃದಯಸ್ಪರ್ಶಿ, ಅಲ್ಲದೆ ಸಕಾಲಿಕವಾಗಿದ್ದವು, ದೇಶದ ಇಂದಿನ ಪರಿಸ್ಥಿತಿಯನ್ನು' ಸಮಾಜದಲ್ಲಿನ ನಡವಳಿಕೆಗಳನ್ನು ಕಂಡ ಒಬ್ಬ ಸರ್ವರ ಕಲ್ಯಾಣಕ್ಕೆ ತಮ್ಮನ್ನೇ ಸಮರ್ಪಿಸಿಕೊಂಡ ಸಂನ್ಯಾಸಿಯ ಪರಿತಪ್ತ ಹೃದಯದ ಅನಿಸಿಕೆ ಅದಾಗಿತ್ತು:

' ಇಂದಿನ ನಮ್ಮ ದೇಶದ ಪರಿಸ್ಥಿತಿಯನ್ನು ಗಮನವಿಟ್ಟು ನೋಡಿದರೆ ಈ ದೇಶದ ಭವಿಷ್ಯ ತೀರಾ ಮಸಕಾಗಿ ಕಾಣುತ್ತದೆ. ಜೀವನದ ಎಲ್ಲಾರಂಗಗಳಲ್ಲಿ ಸಕಲ ಕಾರ್ಯಕ್ಷೇತ್ರಗಳಲ್ಲಿ ಅಶಿಸ್ತು, ಅಶ್ರದ್ಧೆ, ಅಪ್ರಾಮಾಣಿಕತೆ ತಾಂಡವವಾಡುತ್ತಿದೆ, ಅಲ್ಲೊಂದು ಇಲ್ಲೊಂದು ಅಂಥ ಅನೀತಿಯಪ್ರಕರಣಗಳು ಎನ್ನುವಂತಿಲ್ಲ. ಎಲ್ಲೆಲ್ಲೂ ಅದೇ ಹಾಡೇ ! ಯಾವರಂಗದಲ್ಲಿ ಸ್ವಲ್ಪ ಅಶಿಸ್ತುಕಂಡರೆ ಹಿಂದೆ ದೇಶದ ಮುನ್ನಡೆಗೆ ಹಾನಿ ಎಂದು ಹೌಹಾರುತ್ತಿದ್ದೆವೋ ಅದೀಗ ಬದುಕಿನ ಹಾಸುಹೊಕ್ಕು ಎನ್ನುವಂತಾಗಿ ಬಿಟ್ಟಿದೆ ! ಎಲ್ಲಿಯ ತನಕ ಇಂಥ ಹೀನ ನಡವಳಿಕೆ, ಭ್ರಷ್ಟಜೀವನ

ವಿಧಾನ ಸರಿಯಲ್ಲ ಎಂದು ಜನ ತಮ್ಮಷ್ಟಕ್ಕೆ ತಾವು ಭಾವಿಸಿ ಋಜುಮಾರ್ಗದಲ್ಲಿ ಸಾಗುವ ಮನಸ್ಸುಮಾಡುವುದಿಲ್ಲವೋ ಅಲ್ಲಿಯ ತನಕ ದೇಶದ ಉದ್ಧಾರವಿಲ್ಲ.

ವಿದ್ಯಾರ್ಥಿಗಳನ್ನೇ ದೃಷ್ಟಾಂತವಾಗಿ ತೆಗೆದುಕೊಳ್ಳೋಣ. ಅವರದು ಶಿಸ್ತಿನ ಶ್ರದ್ಧೆಯ ಜೀವನವಾಗಿರಬೇಕು. ಶಾಲಾ ಕಾಲೇಜುಗಳಲ್ಲಿ, ವಿಧ್ಯಾರ್ಥಿನಿಲಯಗಳಲ್ಲಿ ಅದನ್ನು ಕಾಪಾಡುವಂತಹ ವಾತಾವರಣವೇ ಇರಬೇಕು. ಆದರೆ ದುರ್ದೈವದ ಮಾತೆಂದರೆ ಸ್ವತಂತ್ರ ದೇಶದ ಪ್ರಜೆಯೆಂಬ ಭಾವ ಸ್ವಚ್ಛಂದತೆಗೆಡೆಕೊಟ್ಟಿತೋ ಏನೋ ನಿಯಮಗಳನ್ನು ಗಾಳಿಗೆತೂರಿ ಸ್ವೇಚ್ಛೆಯಾಗಿ ನಡೆಯುವುದು ಅಭ್ಯಾಸ ವಾಗುತ್ತಾ ಬಂತು. ಸಮಾಜದಲ್ಲಿ ಎಲ್ಲವನ್ನು ಕಾನೂನುಮಾಡಿ, ಬಲವಂತ ಪಡಿಸಿ ಮಾಡಲಾಗುವುದಿಲ್ಲ. ಜನರು ಸ್ವಯಂಪ್ರೇರಣೆಯಿಂದ ಮಾಡುವುದು ಶ್ರೇಯಸ್ಕರ. ಈಗ ಪ್ರಾರ್ಥನೆಯನ್ನೇ ತೆಗೆದುಕೊಳ್ಳಿ. ನೀವು ಇಲ್ಲಿ ಸೇರಿ 10-15 ನಿಮಿಷಕಾಲ ಪ್ರಾರ್ಥನೆಮಾಡುವುದರಿಂದ ನಿಮಗೇನು ನಷ್ಟ? ನಷ್ಟವೇನೂಇಲ್ಲ, ಹಾಗೆ ನೋಡಿದರೆ ಅಧಿಕ ಲಾಭವೇ ಇದೆ. ಆ ಲಾಭ ಈ ಕ್ಷಣ, ಇಲ್ಲೇ ಕಾಣಸಿಗಲಿಕ್ಕಿಲ್ಲ. ನಿಮ್ಮ ಬದುಕಿನ ಮುನ್ನಡೆಯಲ್ಲಿ ಸತ್ಪರಿಣಾಮ ಬೀರುತ್ತದೆ. ಆದರೆ ನೀವು ಮಾಡುವ ಪ್ರಾರ್ಥನೆಯನ್ನು ಯಾಂತ್ರಿಕವಾಗಿ ಕಾಟಾಚಾರಕ್ಕೆ ಮಾಡಿದರೆ ಪ್ರಯೋಜನವಿಲ್ಲ. ಶ್ರದ್ಧೆಯಿಂದ ಮನಃ ಪೂರ್ವಕವಾಗಿ ನೀವು ಪ್ರಾರ್ಥನೆಯಲ್ಲಿ ಪಾಲ್ಗೊಂಡರೆ, ಅದರಿಂದ ಮಾನಸಿಕಶಾಂತಿ, ಜೀವನೋಲ್ಲಾಸವೂ, ಅಭ್ಯಾಸಕ್ಕೆ ಬೇಕಾದ ದೃಢಮನ; ಪ್ರಸನ್ನ ಚಿತ್ತ ದೊರಕುವುದನ್ನು ನಿಮ್ಮ ಅನುಭವವೇ ತೋರಿಸುತ್ತದೆ.

ಈಚೆಗೆ ಪ್ರಾರ್ಥನೆಯಲ್ಲಿ ನಿಮಗೆ ಶ್ರದ್ಧೆ ಕಡಿಮೆಯಾಗುತ್ತಿರುವಂತಿದೆ. ಅಧ್ಯಾಪಕರು ಪ್ರಾರ್ಥನ ಸಭೆಗೆ ನಿಯತವಾಗಿ ಬರುತ್ತಿದ್ದರೆ ನಿಮಲ್ಲಿ ಹೆಚ್ಚಿನ ಶ್ರದ್ಧೆಯಿರುತ್ತಿತ್ತೆಂದು ಕಾಣುತ್ತದೆ. ಅವರಲ್ಲಿ ಸ್ವಲ್ಪ ಕೊರತೆಯಾದುದ್ದು ನಿಮ್ಮಲ್ಲಿ ಅಶ್ರದ್ಧೆ ಹೆಚ್ಚಲು ಕಾರಣವಾಗಿದೆ. ಪ್ರಾರ್ಥನಾ ಸಭೆಯಾಗಲ್ಲೀ, ಅಭ್ಯಾಸ ವೇಳೆಯಾಗಲಿ, ಜೀವನದ ಯಾವುದೇ ಕ್ಷೇತ್ರವಾಗಿರಲಿ, ಶಿಸ್ತಿನಿಂದ ಶ್ರದ್ಧಾಸಕ್ತಿಯಿಂದ ಮಾಡಿದರೆ ವ್ಯಕ್ತಿಯ ಕಲ್ಯಾಣ, ಆಮೂಲಕ ದೇಶದ ಕಲ್ಯಾಣ............

ಸಾಗಿತ್ತು ಶ್ರೀಗಳವರ ಆತ್ಮೀಯಭಾವದ ವಿಚಾರ ಪರಿಪ್ಲುಲ್ಲತ ಹಿತವಚನಧಾರೆ. ಸಮಕಾಲೀನ ಜೀವನದ ಬಗ್ಗೆ ಅವರು ಸ್ಪಂದಿಸಿದ ರೀತಿ, ನಾಡಿನ ಭವಿಷ್ಯದ ಬಗ್ಗೆ ಅವರಿಗಿದ್ದ ಕಾಳಜಿಗಳು ಅವರ ವ್ಯಕ್ತಿತ್ವದ ಘನತೆಗೆ ತಕ್ಕವಾಗಿದ್ದವು.

(61 ನೇ ಪುಟ ನೋಡಿ)



# ಗುರುಸ್ತವನ ಷಟ್ಪದಿ

—ಶ್ರೀ ಪಿ. ಬಸವಣ್ಣನವರು

"ಶ್ರೀ ನಿಜಗುಣ ನಿಲಯ" ಶ್ರೀ ಶಂಭುಲಿಂಗನ ಕ್ಷೇತ್ರ, ಚಿಲಕವಾಡಿ, ಕೊಳ್ಳೇಗಾಲ ತಾ॥

**ಸುಲಭ ಷಟ್ಪದಿ (3.3)**

ಶಿವಕುಮಾರ
ಭವ ವಿದೂರ
ಭುವಿಯ ಭವ್ಯ ಸುಂದರ ।
ತಮಿಸುವೆನ್ನ
ಭವವ ಬಿಡಿಸಿ
ಜವದಿ ಸಲಹು ಗುರುವರ ||೧||

**ಶಿರ ಷಟ್ಪದಿ (4.4)**

ಗುರುವರ ಶ್ರೀ ಕರ
ವರಕರುಣಾಕರ
ಭರದಿಂದೆನ್ನಯ ಸಂಕಟವ
ಪರಿಹರಿಸೆನ್ನುತ
ಮೊರೆಯಿಡುತಲಿ ತವ
ಚರಣಕೆ ನಮಿಸುತ ಬೇಡುವೆ ನಾಂ ||೨||

**ಕುಸುಮ ಷಟ್ಪದಿ (5.5)**

ಬುದ್ಧಿಶೂನ್ಯರು ಬಂದು
ಸದ್ದುಗದ್ದಲ ಗೈದು
ರಾದ್ಧಾಂತ ವೆಸಗುತ್ತಾ ನಿದಿಂಸಿದರುಂ ।
ಶುದ್ಧಮನ ದಿಂದವರ
ಸುದ್ಧರಿಪ ಯೋಗೀಶ
ಸಿದ್ಧಗಂಗೇಶ ಪೊರೆ ಭೂಶಿವೇಶ ||೩||

**ಭೋಗಷಟ್ಪದಿ (3.3.3.3)**

ಭವನ ಬೆರೆದು ಸುಖಸುತಿರದೆ
ವಿವಿಧ ವಿಷಯಗಳಲಿ ಮುಳುಗಿ
ಭವದಿ ಬಿದ್ದು ಬಗೆಬಗೆಯೊಳು ಬವಣೆಗೊಳುತಿಹ।
ಭುವಿಯ ಜನರ ಪೊರೆಯೆ ಧರೆಗೆ
ಶಿವನ ರೂಪ ತೊಟ್ಟು ಬಂದ
ಶಿವಕುಮಾರ ಪಾಪದೂರ ಪೊರೆಯೊ ಗುರುವರ ||೪||

**ಭಾಮಿನಿ ಷಟ್ಪದಿ. (3.4.3.4)**

ಮೆದ್ದಲಿಕ್ಕೇನೊಂದು ಮಿಲ್ಲದ
ಮುಗ್ಧ ರೈತರ ಮುದ್ದು ಮಕ್ಕಳು
ಬುದ್ಧಿ ನೀವೇ ದಿಕ್ಕೆನುತ ಬಿದ್ದೋಡಿ ಬಂದಾಗ।
ಮುದ್ದೆಯನ್ನವನಿತ್ತು ಪ್ರೀತಿಸಿ
ವಿದ್ಯೆಬುದ್ಧಿಯ ಕಲಿಸಿ ಸಲಹುವ
ಸಿದ್ಧಗಂಗಾ ಮಠದೊಡೆಯ ಶ್ರೀ ಶಿವಕುಮಾರ ಪೊರೆ ||೫||

**ಪ್ರತಿಭಾಮಿನಿಷಟ್ಪದಿ. (4.3.4.3)**

ಗುರುವರ ಮಾರಸುಂದರ ಸಾರ
ತರವೇದಾಗಮ ವಿಚಾರ ಪರ
ಕರುಣಾ ಸಾಂದ್ರಾ ಸಾಗರ ಚಾರುಸಿದ್ಧಿ ಗಳಾಗರ।
ಶರಣಾನಂದ ಶರಧಿಹಿಮಕರ
ದುರಿತೌಘಹರ ನೀನನವರತ
ಕರಪಿಡಿದೆನ್ನ ಸಲಹೈ ಸಲಹೈ ಸಿದ್ಧಗಂಗಾಧೀಶ್ವರ ||೬||

**ಪರಿವರ್ಧಿನಿ ಷಟ್ಪದಿ (4.4.4.4.)**

ಭುವಿನುತ ಗುರುವರ ಕರುಣಾ ಸಾಗರ
ಶಿವ ಸಮ ಸುಂದರ ಭವಭಯ ಪರಿಹರ
ತವಿಸುವ ಭಕ್ತರ ತಾಮಸ ಸಂಹರ ಸಚ್ಚಾರಿತ್ರವರ।
ಕವಿಜನವರ್ಣಿತನಯನ ಮನೋಹರ
ಸವಿನಯದಾಗರ ಸದ್ಗುಣಮಂದಿರ
ತವಪದಕೆರಗುವೆ ವಿನಯದಿ ಬಾಗುತ ಜಂಗಮ ಬಂಗಾರ ||೭||



**ಬಸವಷಟ್ಪದಿ (3.5.3.5)**

ಶಿವಕುಮಾರೇಶ ಭವಭಯವಿನಾಶ
ಭುವಿಯ ಪರಮೇಶ ಭಕ್ತಜನ ಪೋಷ
ಕವಿಜನಾನಂದ ಕೋಶ ಶಿಷ್ಯಜನ ಹೃತ್ಕಮಲ ದಿನೇಶ।
ತವಿಪ ವಿದ್ಯಾರ್ಥಿವೃಂದ ಜೀವೇಶ
ಕವಿದ ಹೃತ್ತಮವ ಕಳೆವ ಚಿತ್ಪೂಷ
ತವಪದಕೆ ಮಣಿವೆ ಸಿದ್ಧಗಂಗಾಮಠೇಶ ಜಂಗಮೇಶ ||೮||

**ಬಾಣತ್ರಯಷಟ್ಪದಿ (5.3.5.3)**

ಶರಣಜನರನ್ನ ಸುಗುಣಸಂಪನ್ನ
ದುರಿತೌಘಭಂಗ ವಿರತಜನಸಂಗ
ಪರಮಾರ್ಥಕೋಶ ಶರ್ವಸಂಕಾಶನೆಂದೊಲಿದು ಭಜಿಸುತ।
ಚರಣ ಸರಸಿಜಕೆ ಶಿರಬಾಗಿ ನಮಿಪೆ
ಪರಮ ಶಿವಯೋಗ ಸಂಪದವನಿತ್ತು ಕರುಣಿಸೈ ಸಿದ್ಧಗಂಗಾ ಮಠೇಶ
ಅಘಮದ ಗಜಾಂಕುಶ ||೯||

**ಪ್ರೌಢ ಷಟ್ಪದಿ (4.5 4.5) (ಪಟ್ಟೇದ ಚನ್ನಪ್ಪನವರ)**

ತ್ರೈಮಲವಂ ಸವೆಸಿ ಪರಿಶುದ್ಧ ಗೊಳಿಸಿ
ತಾಮಸವಂ ಹರಿಸಿ ಸಾತ್ವಿಕಮಂ ಭರಿಸಿ
ಕಾಮಾದಿಗಳನ್ನಳಿಸಿ ಮೈದಡವಿ ಕೈಪಿಡಿದನವರತ ಹರಸಿ
ನಾಮಾದಿಯೊಳಗಭಿಮಾನಗಳಂ ಬಿಡಿಸಿ
ಭೂಮಿಯೊಳಿನ್ನುದಿಸದಂತಾ ಶೀರ್ವದಿಸಿ
ಪ್ರೇಮದಿ ಸಲಹೆಂದು ಶ್ರೀ ಉದ್ದಾನೇಶಸುತನಂ ಬೇಳ್ವೆ ನಮಿಸಿ||೧೦||

**ಪ್ರತಿಪ್ರೌಢ ಷಟ್ಪದಿ (4.5 4.೯)**

ತಾದಾತ್ಮ್ಯ ಯಿಂದಿಪ್ಪದಿ ಸದಾ ಬೆರೆವ ವಿ
ನೋದದಿಂದೆಳೆಯ ಹಿತಕೆ ದುಡಿವ ದೀನರ
ಸಾದರದಿ ಸಲಹುವ ಕಾಮಿತಾರ್ಥಗಳ ನೀಡಿ ಭಕ್ತರ ಪೊರೆವ।
ಭೇದವೆಣಿಸದೆ ಸರ್ವಜನಕುಂ ಸದ್ಗತಿ
ಬೋಧಿಸುವ ಕಾಯಕ ಕೈಲಾಸವೆನ್ನುವ
ಮೇದಿನಿಯ ಶಿವ ಶ್ರೀ ಸಿದ್ಧಗಂಗಾಧವ ಭಜಿಪೆ ನಾಂ ತವಪದವ||೧೧||

ವಾರ್ಧಕಷಟ್ಪದಿ (55.5.5)
ಬುದ್ಧಿ ತಾನರಿಯದುದ ನನುಭಾವ ದಿಂದರಿವ
ಶುದ್ಧಾತ್ಮ ಚೈತನ್ಯ ಮಂಗಳಾತ್ಮಕ ಮೂರ್ತಿ
ವಿದ್ವವರ ಮೇಲೆತ್ತಿ ಮುದ್ದಿಸುತ ಸಂತೈಪ ಕಾರಣಿಕ ಪುರುಷ ।
ಸಿದ್ಧಿಗಳ ಲೆಕ್ಕಿಸದ ಘನಮಹಿಮ ಸಂಸದ್ಧ
ಬದ್ಧನಾದೆನ್ನ ಪೊರೆ ಶಿವಯೋಗವನ್ನರುಹಿ
ಸಿದ್ಧಗಂಗಾಮಠಾಧ್ಯಕ್ಷ ಭಕ್ತಜನ ಸಂರಕ್ಷಣಾಕಾರ್ಯದಕ್ಷ ॥೧೨॥

ಉದ್ದಂಡ ಷಟ್ಪದಿ (4.4.4.4.4) (ರಾಘವಾಂಕ
ಭವಹರ ಭೂಸ್ಮರ ತ್ರಿಭುವನ ಸುಂದರ ಶುಭಕರ
ಶಿವಶರಣಾನಂದ ಸುಧಾಸಾಗರಚಂದಿರ
ಶಿವಯೋಗಾನಂದದಿ ನೆರೆನಿದ್ರಿಸಿ ಸುಖಿಸುವ ಯೋಗಿಜನಾನಂದಕರ ।
ಜವದಿಂದೇಳುತ್ತೆನ್ನಯ ಕಷ್ಟವ ನೀಗು
ತ್ತವುಗಳ ಮತ್ತೆನಗೀಯದೆ ಕಾಪಾಡೆನ್ನುತ
ತವಪದಕಮಲಕೆ ವಿನಯದಿ ಮಣಿಯುವೆ ಶ್ರೀ ಉದ್ದಾನೇಶ್ವರ
ಸುಕುಮಾರ ॥೧೩॥

22 ರುದ್ರ ಷಟ್ಪದಿ (3,3,5. 3.3.5)
ಗುರುವೆ ಧರೆಯ ಸುರತರುವೆ ಪರವೆ ಶಾಂತಿಸಾಗರವೆ
ಪರಮ ಮುಕ್ತಿಮಂದಿರವೆ ಭೋಗ ಭಾಗ್ಯದಾಗರವೆ
ನಿರಘನಿತ್ಯನಿಜದರಿವೆ ಚಾರುಮಂಗಳಸದನವೆ ದೀನದಲಿತ ಜನ
ಬಂಧುವೆ ॥
ವಿರತಸಜ್ಜನಾಶ್ರಯವೆ ಭಕ್ತಮಕುಟಮಾಣಿಕವೆ
ಹರಸಿ ಪೊರೆವ ಚಿದ್ಘನವೆ ಸಾರಸುಗುಣಶಿವ ಸುಖವೆ
ನಿರುತ ಸಲಹು ಸದ್ಗುರುವೆ ಶಿವಕುಮಾರ ಗುರುತಿಲಕವೆ ॥೧೪॥

24 ಭಾಗ್ಯ ಷಟ್ಪದಿ (3.3.3.3.3.3.3.3.)
ಗುರುವೆ ಭಕ್ತಕಲ್ಪತರುವೆ ಸಾರಸುಗುಣಭವ್ಯಗೃಹವೆ
ಶರಣ ಜನರ ಸಾರಸುಖವೆ ನೀತಿನಿಯಮಧರ್ಮ ಬಿಟ್ಟು
ನರಕದಲ್ಲಿ ಬಿದ್ದು ಸಾಯ್ವ ಬದ್ಧ ಜನರ ತಿದ್ದಿ ಕಾಯ್ವ ಭುವಿಯ
ಮೇಲೆ ಚಲಿಪ ದೈವವೆ ॥
ನಿರುತ ಶಿಷ್ಯಕೋಟಿಗೊಲಿದು ಪರವ ಬೆರೆವ ಮಾರ್ಗದೋರ್ಪ
ಪರಮಪಾರಮಾರ್ಥದರಿವೆ ಭವಕೆ ಬಾರದಿರಿಸುಯೆನುತ
ಕರವ ಮುಗಿವೆ ಭರದಿ ಸಲಹು ಶಿವಕುಮಾರ ಸಿದ್ಧಗುರುವೆ
ನಾಡಜನರ ಪುಣ್ಯಪುಂಜವೆ ॥೧೫॥



# ಕರ್ನಾಟಕದ ಸಂಗೀತಕ್ಕೆ ಶರಣರ ಕೊಡುಗೆ

— ಹೆಚ್. ಗಂಗಾಧರನ್
ಸಂಪಾದಕರು, 'ಶ್ರಿ ಮಹದೇಶ್ವರ ದರ್ಶನಮ್', ಮೈಸೂರು

ಭಾರತದ ಸಂಗೀತ ಪ್ರಪಂಚದಲ್ಲಿ ಕರ್ನಾಟಕದ ಸಂಗೀತ ಕಲೆಗೆ ಪ್ರಮುಖ ಸ್ಥಾನ ಇದೆ. ದಕ್ಷಿಣ ಭಾರತದಲ್ಲಿ ರೂಢಿಯಲ್ಲಿರುವ ಸಂಗೀತವನ್ನು ಕರ್ನಾಟಕ ಸಂಗೀತ ಎಂದೇ ಕರೆಯುತ್ತಾರೆ. ಆದರೆ ಕರ್ನಾಟಕದಲ್ಲಿ ವಾಗ್ಗೇಯಕಾರ, ಉಗಮ ಎಂದಾಯಿತು ಎಂಬುದರ ಬಗ್ಗೆ ಜಿಜ್ಞಾಸೆ ಇದೆ. ಕನ್ನಡ ಸಾಹಿತ್ಯವು ಒಂಭತ್ತನೇ ಶತಮಾನ ದಿಂದ ಪ್ರಕಾಶಕ್ಕೆ ಬಂದಿದ್ದರೂ ಅದಕ್ಕೆ ಹಿಂದೆಯೇ ಕನ್ನಡ ಸಾಹಿತ್ಯ ಇತ್ತು ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಪ್ರಥಮದಲ್ಲಿ ಕನ್ನಡ ಸಾಹಿತ್ಯವು ಬೆಳೆದು ಬಂದಿದ್ದು ಬಹು ಪಾಲು ಪದ್ಯ ಕಾವ್ಯವಾಗಿಯೇ. ಪದ್ಯ ಕಾವ್ಯವು ಹಾಡುವುದಕ್ಕೂ ಓದುವುದಕ್ಕೂ, ರಂಜನೀಯವಾಗಿರುವ ಕಾರಣ ಕವಿಗಳು ತಮ್ಮ ಭಾವನೆಯನ್ನು ಉದ್ದೇಶವನ್ನು ಪದ್ಯ ರೂಪದಲ್ಲಿ ಚಿತ್ರಿಸಿರುವುದು ವೇದ್ಯವಾಗಿದೆ.

ಜನ ಸಾಮಾನ್ಯರ ದೃಷ್ಟಿ ಇದ್ದಲ್ಲಿ ತಮ್ಮ ವಿಚಾರ ಧಾರೆಯನ್ನು ಬಿತ್ತರಿಸಿದ 12 ನೇ ಶತಮಾನದ ಶರಣರು ಒಂದು ಪದ್ಯ ಗದ್ಯಾತ್ಮಕ ಸಾಹಿತ್ಯವನ್ನು ಬೆಳೆಸಿದರು. ಅದಕ್ಕೆ ವಚನ ಶಾಸ್ತ್ರ ವೆಂದು ಕನ್ನಡ ಸಾಹಿತ್ಯದಲ್ಲಿ ಕರೆಯಲಾಗಿದೆ. ವಚನಗಳು ಹಾಡುವುದಕ್ಕೂ ಓದುವುದಕ್ಕೂ ಸರಳವಾಗಿದೆ. ಆದರೆ ಶರಣರಿಗೆ ಸಂಗೀತ ಶಾಸ್ತ್ರದ ಅರಿವಿದ್ದು ಸಂಗೀತಕ್ಕೆ ಅಳವಡುವಂಹ ಕೃತಿಯನ್ನು ರಚಿಸಿ ವಾಗ್ಗೇಯಕಾರರಾಗಿರುವುದು ವಚನ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಶರಣ ಸಂಸ್ಕೃತಿಯ ಪ್ರವರ್ತಕರಾದ ಬಸವಣ್ಣನವರು ಒಬ್ಬ ವಾಗ್ಗೇಕಾರರೆಂದೇ ಹೇಳಬಹುದು. ತಮ್ಮ ಭಕ್ತಿ ಭಾವದಲ್ಲಿ ಪರಮಾತ್ಮನನ್ನು ಪಾರ್ಥಿಸುವಾಗ ಗಾಯನ ರೂಪದಲ್ಲಿ ಭಗವಂತನನ್ನು ಪ್ರಾರ್ಥಿಸುವುದು ಗೋಚರವಾಗುತ್ತದೆ. "ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ" ಎಂದಿದ್ದಾರೆ. ಅವರ ಭಕ್ತಿ ಭಾವನೆ ಉಜ್ವಲವಾದುದು. ಅದನ್ನು ವ್ಯಕ್ತ ಪಡಿಸುತ್ತಾ

"ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು
ಹಾಡಿ ನಾಲಿಗೆ ದಣಿಯವು – ಇನ್ನೇವೆ ಇನ್ನೇವೆ ?
ನಾ ನಿಮ್ಮ ಕೈಯ್ಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆನಿನ್ನೇವೆ ?

ಕೂಡಲಸಂಗಮದೇವಾ ಕೇಳಯ್ಯಾ
ನಿಮ್ಮುದರವ ಬಗಿದಾನು ಹೋಗುವ ಭರವೆನಗೆ"

ಬಸವಣ್ಣನವರಿಗೆ ಸಂಗೀತದ ರಾಗ, ತಾಳ, ಲಯಗಳ ಪರಿಚಯವೂ ಇರಬಹುದೆಂದು ಹೇಳಲು ಸಾಧ್ಯಇದೆ. ಅದನ್ನು ಅವರೇ ಹೀಗೆ ಹೇಳಿದ್ದಾರೆ.

"ತಾಳಮಾನಸರಿಸವನರಿಯೆ
ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ,
ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ"

ಭಗವಂತನನ್ನು ಪ್ರಾರ್ಥಿಸಬೇಕು ಎಂದು ಮನಸ್ಸು ಮಾಡಿದಾಗ ರಾಗ ತಾಳಗಳ ಎಲ್ಲೆ ಮೀರಿ ಆನಂದ ಭರಿತರಾಗಿ ಹಾಡುತ್ತಾ ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ. ದೇವರ ಒಲುಮೆಗೆ ಗಾಯನವು ಒಂದು ಉತ್ತಮ ಮಾಧ್ಯಮ ಎಂದೂ ಸಾಧನ ಎಂದೂ ಅವರು ಭಾವಿಸಿದ್ದಿರಬೇಕು. ಅದುದರಿಂದ ಇಡೀ ದೇಹವನ್ನು ಗಾಯನದ ಸಾಧನವಾಗಿ ಮಾಡಿಕೊಳ್ಳಬೇಕು ಎಂದು ಅಪೇಕ್ಷಿಸಿದ್ದಾರೆ. ಅದುದರಿಂದಲೇ ಅವರು ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

"ಎನ್ನ ಕಾಯುವ ದಂಡಿಗೆಯ ಮಾಡಯ್ಯಾ
ಎನ್ನ ಶಿರವ ಸೋರೆಯಮಾಡಯ್ಯಾ
ಎನ್ನ ನರವ ತಂತಿಯ ಮಾಡಯ್ಯಾ
ಎನ್ನ ಬೆರಳ ಕಡ್ಡಿಯ ಮಾಡಯ್ಯಾ
ಬತ್ತೀಸ ರಾಗವ ಹಾಡಯ್ಯಾ, ಉರದಲೊತ್ತಿ ಬಾರಿಸು
ಕೂಡಲಸಂಗಮದೇವಾ"

ಈ ವಚನದಿಂದ ಅವರಿಗೆ ರಾಗಗಳ ಪರಿಚಯ ಇರುವುದು ಮತ್ತು ಹಾಡಿಗೆ ಧ್ವನಿ ಕೊಡುವ ಉಪಕರಣಗಳ ನೆರವನ್ನು ಪಡೆಯುವುದು ತಿಳಿದಿತ್ತು ಎನ್ನಬಹುದು. ಅವರ ಅನುಭವದ ಧಾಟಿಯನ್ನೇ ಅನುಸರಿಸಿ ಕಲ್ಯಾಣದ ಶರಣರು ಅನೇಕರು ಗಾಯಕರಾಗಿ, ವಾಗ್ಗೇಯಕರಾಗಿ ರೂಪುಗೊಂಡಿದ್ದಾರೆ. ಸರಳ ಸಾಹಿತ್ಯದಲ್ಲಿ ಕೃತಿಯನ್ನು ರಚನೆ ಮಾಡಿದ ಅಕ್ಕಮಹಾದೇವಿಯವರು ತಮ್ಮ ಪೂಜಾನುಷ್ಠಾನದಲ್ಲಿ ಹಾಡುತ್ತಾ ಇದ್ದರು. ಅದನ್ನು ಅವರ ಒಂದು ವಚನದಲ್ಲಿ ಕಾಣಬಹುದು.

"ಸಜ್ಜನೆಯಾಗಿ ಮಜ್ಜನಕ್ಕೆರೆವೆ, ಶಾಂತಳಾಗಿ ಪೂಜೆ ಮಾಡುವ
ಸಮರತಿಯಿಂದ ನಿಮ್ಮ ಹಾಡುವೆ



ಚೆನ್ನಮಲ್ಲಿಕಾರ್ಜುನಯ್ಯಾ
ನಿಮ್ಮನಗಲದ ಪೂಜೆ ಅನುವಾಯಿತ್ತೆನಗೆ"

ಕಲ್ಯಾಣದ ಶರಣರ ಸಾಧನೆಯಲ್ಲಿ ಸಮರಸ ಭಾನವೇ ಒಂದು ಮೂಲ ಸೂತ್ರವಾಗಿದೆ. ಶರಣರು ವೈಯಕ್ತಿಕವಾಗಿ ಲಿಂಗ, ಅಂಗ ಸಮರಸವನ್ನು ಸಾಧಿಸುತ್ತಿದ್ದರು. ಸಾಮೂಹಿಕವಾಗಿ ಜೀವನದಲ್ಲಿ ಸಿದ್ಧಿಯನ್ನು ಪಡೆಯುವುದಕ್ಕಾಗಿ ವ್ಯಾವಹಾರಿಕ ಸಮರಸವನ್ನು ಸಾಧಿಸುತ್ತಿದ್ದರು. ಅವರ ಸಾಧನೆಯ ವಿವರವನ್ನು ಅಕ್ಕನವರ ನುಡಿಯಲ್ಲಿ ನೋಡಬಹುದು.

"ಆಡುವುದು, ಹಾಡುವುದು, ಹೇಳುವುದು, ಕೇಳುವುದು, ನಡೆವುದು, ನುಡಿವುದು
ಸರಸ ಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ
ಚೆನ್ನಮಲ್ಲಿಕಾರ್ಜುನಯ್ಯಾ, ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ
ಲಿಂಗ ಸುಖಿಗಳ ಸಂಗದಲ್ಲಿ ದಿನಗಳ ಕಳೆವೆನು"

ಇತಂಹ ಭಾವನೆಗಳು ಅನೇಕ ಶರಣರ ನುಡಿ ಮಾಲೆಯಲ್ಲಿ ಸಿಗುತ್ತದೆ.ಅಲ್ಲಮ ಪ್ರಭುಗಳ ಜೀವನವನ್ನು ಚಿತ್ರಿಸಿದ ಚಾಮರಸ ಕವಿ ಪ್ರಭುದೇವರನ್ನು ಮೃದಂಗ ತಾಳ ವಾದ್ಯದ ಪ್ರವೀಣರು ಎಂದೇ ಬಣ್ಣಿಸಿದ್ದಾನೆ. ಪ್ರಭುದೇವರು ವಾಗ್ಗೇಯಕಾರರಾಗಿ ಅನೇಕ ಕೃತಿಯನ್ನು ರಚಿಸಿದ್ದಾರೆ ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಬಹುಶಃ ಬಸವಣ್ಣನವರ ಗಮನಕ್ಕೆ ಬಂದಂತೆಯೇ ಸಾಕಷ್ಟು ವಿಸ್ತಾರವಾಗಿ ಸಂಗೀತ ಕೃತಿಗಳು ರಚನೆಯಾಗಿರಬಹುದು. ಎಂದು ಊಹಿಸಲು ಸಾಧ್ಯವಿದೆ. ಅವರೇ ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು
ಮುಟ್ಟುವ ತೆರನನರಿಯದನ್ನಕ್ಕ ?
ಕಟೆದಡೇನು, ಬಿಟ್ಟಡೇನು
ಮನವು ಲಿಂಗದಲ್ಲಿ ಮುಟ್ಟದನ್ನಕ್ಕ
ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವಾ

ಶರಣರು ಸಂಗೀತ ಕೃತಿಗಳನ್ನು ರಚಿಸಿದ್ದರು ಎಂಬುದು ಇಂದು ನಿರ್ವಿವಾದವಾಗಿದೆ. ಸುಮಾರು ಅರ್ಧ ಶತಮಾನದಿಂದ ವಚನ ಸಾಹಿತ್ಯದ ಬಗ್ಗೆ ಕನ್ನಡ ನಾಡಿನಲ್ಲಿ ಸಾಕಷ್ಟು ಸಂಶೋಧನೆ ನಡೆಯುತ್ತಾ ಬಂದಿದೆ. ಆದರೆ ಸಂಗೀತದ ಬಗ್ಗೆ ಕೃತಿಗಳ ಯಾವ ಪ್ರಯತ್ನವು ನಡೆದಿರಲಿಲ್ಲ. ಮೊಟ್ಟ ಮೊದಲಿಗೆ ವಿದ್ವಾಂಸರಾದ ಡಾ: ಎಲ್. ಬಸವರಾಜು ರವರು ಈ ಪವಿತ್ರ ಕಾರ್ಯವನ್ನು

ಕೈಗೊಂಡು ತಮ್ಮ ಸಂಶೋಧನೆ ಪರಿಣಾಮವಾಗಿ "ಶಿವದಾಸ ಗೀತಾಂ
ಜಲಿ" ಎಂಬ ಗ್ರಂಥವನ್ನು ರಚಿಸಿದರು. ಆ ಕೃತಿ "ಜಗದ್ಗುರು ಶ್ರೀ ಶಿವರಾತ್ರೀಶ್ವರ
ಗ್ರಂಥಮಾಲೆಯಲ್ಲಿ" ಪ್ರಕಟವಾಯಿತು. ಕೃತಿಯಲ್ಲಿ 27 ಜನ ಶರಣರ ಕೃತಿಯನ್ನು
ಸಂಶೋಧಿಸಿ ಪ್ರಕಟಿಸಿದ್ದಾರೆ. 27 ಜನ ಶರಣರಲ್ಲಿ ಬಸವ, ಅಲ್ಲಮ ಪ್ರಭು' ಚೆನ್ನ
ಬಸವ, ಸಿದ್ಧರಾಮ, ಅಕ್ಕಮಹಾದೇವಿ, ಬಸವನ ಅರ್ಧಾಂಗಿಯಾದ ನೀಲಲೋಚನೆ
ಯಮ್ಮ, ಸೊಡ್ಡಳ ಬಾಚರಸ, ಹಾವಿನ ಕಾಳಕಲ್ಲಯ್ಯ, ಸಕಲೇಸ ಮಾದರಸ, ನಿಜ
ಗುಣ, ನಿಜಲಿಂಗ ಚಿಕ್ಕಯ್ಯ, ಅಮುಗಿದೇವಯ್ಯ, ಗುರುಪುರದ ಮಲ್ಲಯ್ಯ, ಆದಯ್ಯ,
ಬಹುರೂಪಿ ಚೌಡಯ್ಯ, ಅಗ್ಗಣಿ ಹೊನ್ನಯ್ಯ ಮುಂತಾದವರು ಬಸವಣ್ಣನವರ
ಸಮಕಾಲೀನವವರು ಸ್ವಲ್ಪ ಕಾಲದ ನಂತರ ಕರಸ್ಥಲದ ನಾಗದೇವ, ಗುರುಬಸವ,
ನಿರ್ವಾಣ ಬೋಳೇಶ, ಶಂಕರದೇವ, ಭತಳೇಶ, ಚಿಕ್ಕಯ್ಯ ಮುಂತಾದವರು ಗೀತೆಗಳನ್ನು
ರಚಿಸಿದ್ದಾರೆ ಎಂದು ಹೇಳದ ಬಸವರಾಜುರವರು "12ನೇ ಶತಮಾನಕ್ಕಿತ ಹಿಂದೆಯೇ
ಹಲವಾರು ಶಿವದಾಸರು ಹಾಡುಗಳನ್ನು ಬರೆದಿರುವರು ಎಂಬುದಕ್ಕೆ ನಮಗೆ ಆಧಾರಗಳು
ಇವೆ. ಅವರ ಹಾಡುಗಳು ಸಿಕ್ಕಿಲ್ಲ. ಆದರೆ ಬಸವಣ್ಣನವರ ಸಮಕಾಲೀನರಾದ ಶರಣರು
ರಚಿಸಿದ ಹಾಡುಗಳು ನಮಗೆ ಹೇರಳವಾಗಿ ದೊರೆಯುವುವು" ಎಂದು ಉಲ್ಲೇಖಿಸಿದ್ದಾರೆ.
ಈ ಶಿವದಾಸ ಗೀತಾಂಜಲಿಯಲ್ಲಿ ಪ್ರಕಟ ಆಗಿರುವುದಕ್ಕಿಂತಲೂ ಹೆಚ್ಚು ಕೃತಿಗಳು
ನಮಗೆ ದೊರೆತಿರುವುದಾಗಿ ಶ್ರೀ ಪಿ. ಎಂ. ಗಿರಿರಾಜರವರು 'ಸಿದ್ಧಗಂಗಾ ಶ್ರೀ ಅಭಿ
ನಂದನ ಸಂಪುಟದಲ್ಲಿ ಬರೆದ ತಮ್ಮ ಲೇಖನದಲ್ಲಿ ಉಲೇಖಿಸಿದ್ದಾರೆ.

ಈಗ ಪ್ರಕಟವಾಗಿರುವ ಕೃತಿಯನ್ನು ಗಮನಿಸಿದರೆ ಶರಣರ ಕೃತಿಗಳು
ಹರಿದಾಸರ ಕೃತಿಗಳ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದೆ ಎಂದು ಹೇಳಬಹುದು.
ಹರಿದಾಸರ ಕೃತಿಯಲ್ಲಿ ಕೆಲವೊಮ್ಮೆ ಶರಣರ ವಚನಗಳು ಪದ್ಯ ರೂಪಕ್ಕೆ ರೂಪುಗೊಂ
ಡಿರುವುದನ್ನು ನೋಡಬಹುದಾಗಿದೆ, ಕೆಲವು ಪದ್ಯಗಳ ಅಂತ್ಯದಲ್ಲಿ ಇರುವ ಶಿವನಾ
ಮವನ್ನು ತೆಗೆದು ಹರಿದಾಸರ ನಾಮದಿಂದ ಮುಕ್ತಾಯಗೊಳಿಸಿರುವುದು ಕಂಡು
ಬರುತ್ತದೆ. ಅಕ್ಕಮಹಾದೇವಿಯವರ ಪ್ರಸಿದ್ಧ ಕೃತಿ "ನಂಬಿದೆ ಗುರುವೆ ನಂಬಿದೆ
ಸ್ವಾಮಿ ನಂಬಿದೆ ಅಂಬಿಕಾ ರಮಣ ನೀ ನಂಬಿಗಾ"

ಎಂಬ ಕೃತಿಯನ್ನು ಹರಿದಾಸರ ಅದೇ ಕೃತಿಗೆ ಹೋಲಿಸಿ ನೋಡಬಹುದು.
ಅಕ್ಕಮಹಾದೇವಿಯವರು ಈ ಕೃತಿಯ ಕೊನೆಯಲ್ಲಿ "ನಿತ್ಯ ಮುಕ್ತ ನಮ್ಮ ಚೆನ್ನ
ಮಲ್ಲಿಕಾರ್ಜುನನ ಮುಕ್ತ ಮಂಟಪಕ್ಕೆ ಒಯ್ಯೋ ಅಂಬಿಗಾ" ಎಂದಿದ್ದಾರೆ. ಹರಿದಾ
ಸರ ಕೃತಿಯಲ್ಲಿ ಚೆನ್ನಮಲ್ಲಿಕಾರ್ಜುನನ ಸ್ಥಾನದಲ್ಲಿ ಪುರಂದರವಿಠಲನನ್ನು ಸ್ಮರಿಸಲಾ
ಗಿದೆ.

ಶರಣರು ರಚಿಸಿದ ಕೃತಿಗಳು ಸಹಸ್ರಾರು ಇದ್ದರೂ ಅವು ಪ್ರಚಲಿತವಾಗದೆ
ಇರಲು ಅನೇಕ ಕಾರಣಗಳು ಇರಬಹುದು. ವಚನ ಸಾಹಿತ್ಯದ ಸಂಶೋಧನೆಯು



ಪ್ರಾರಂಭವಾದದ್ದೇ ಕೇವಲ ಅರ್ಧ ಶತಮಾನದಿಂದ ಇತ್ತೀಚೆಗೆ. ಇನ್ನೂ ಈ ವಾಗ್ಗೇಯ
ಕೃತಿಗಳ ಬಗ್ಗೆ ಸಂಶೋಧನೆ ಪ್ರಾರಂಭ ಆಗಿರಲಿಲ್ಲ. ಅಲ್ಲದೆ ಆ ಕೃತಿಗಳು ಪ್ರಚಾರಕ್ಕೆ
ಬರದೆ ಇರಲು ಒಂದು ಮೂಲ ಕಾರಣವೂ ಇರಬಹುದು. ಶರಣರ ಕೃತಿಯಲ್ಲಿ ಸಿದ್ಧಾಂ
ತಕ್ಕೆ ತತ್ವ ವಿವೇಚನೆಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಿದೆ. ಆದುದರಿಂದ ಅವರು
ಬಿಗಿಯಾದ ಭಾಷೆಯನ್ನು ಬಳಸಿದ್ದಾರೆ. ಹರಿದಾಸರ ಕೃತಿಯಲ್ಲಿ ಸಾಮಾಜಿಕ ಮತ್ತು
ನೈತಿಕ ವಿಷಯಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಿರುವುದರಿಂದ ಅವು ಸರಳ
ಭಾಷೆಯಲ್ಲಿ ರೂಪುಗೊಂಡಿರುವ ಕಾರಣ ಗಾಯಕರು ಸುಲಭವಾಗಿ ಅವುಗಳನ್ನು
ಆರಿಸಿಕೊಳ್ಳುತ್ತಾರೆ. 12ನೇ ಶತಮಾನದ ನಂತರ ಪರಂಪರೆಯಲ್ಲಿ ಗಾಯಕರು ಸಾಕ
ಷ್ಟು ಜನ ಬೆಳೆಯಲಿಲ್ಲ. ಆದಕಾರಣ ಶರಣರ ವಾಗ್ಗೇಯ ವೈಭವ ಬೆಳಗಲಿಲ್ಲ. ತದ
ನಂತರ 13ನೇ ಶತಮಾನದಲ್ಲಿ ಹರಿಹರ, ರಾಘವಾಂಕರು, ಅನಂತರ 16ನೇ ಶತಮಾ
ನದಲ್ಲಿ ನಿಜಗುಣ ಶಿವಯೋಗಿಗಳು, ನಂತರ ಮುಪ್ಪಿನ ಷಡಕ್ಷರಿಗಳು, ಸರ್ಪಭೂಷಣ
ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು ರಾಗ, ತಾಳ, ಲಯ
ಬದ್ಧವಾಗಿ, ಕೃತಿಯನ್ನು ರಚಿಸಿದ್ದಾರೆ. ಒಂದು ಕಾಲದಲ್ಲಿ ಕನ್ನಡ ನಾಡಿನಲ್ಲಿ ನಿಜಗುಣ
ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು ಮತ್ತು ಮುಪ್ಪಿನ ಷಡಕ್ಷರಿಗಳ
ಕೃತಿಗಳು ಜನಜನಿತವಾಗಿದ್ದವು. ಬೀದಿಯಲ್ಲಿ ತಿರುಗುವ ಭಿಕ್ಷುಕನಿಂದ ಹಿಡಿದು ದೇವಾ
ಲಯದಲ್ಲಿ ಮೋಕ್ಷವನ್ನು ಪ್ರಾರ್ಥಿಸುತ್ತಿದ್ದ ಭಕ್ತನವರೆಗೆ ಈ ಗೀತೆಗಳ ವಾಹಿನಿ ಪ್ರವ
ಹಿಸುತ್ತಿತ್ತು. ಈ ಮೂವರ ಕೃತಿಯಲ್ಲೂ ಆಧ್ಯಾತ್ಮ ತತ್ವಕ್ಕೆ ಪ್ರಾಧಾನ್ಯತೆ ಇರುವುದು
ಕಂಡು ಬರುತ್ತದೆ. ಈ ಕೃತಿಗಳು ಸಾಕಷ್ಟು ಬೆಳಕಿಗೆ ಬರದೆ ಇರಲು ಅದು ಒಂದು
ಕಾರಣ ವಿರಬಹುದು. ಅದಕ್ಕಿಂತಲೂ ಮಿಗಿಲಾಗಿ ಶರಣರ ಸಂಪ್ರದಾಯಕ್ಕೆ ಸೇರಿದ
ಅಭಿಮಾನಿಗಳಲ್ಲಿ ಗಾಯನ ಕಲೆಯ, ಅಭಿರುಚಿಯ ಕೊರತೆ ಉಂಟಾಯಿತು. ಸಂಗೀತ
ಸಂಸ್ಕೃತಿಯಲ್ಲಿ ತಮ್ಮನ್ನು ಅರ್ಪಿಸಿಕೊಂಡ ಸಂಪ್ರದಾಯ ಶರಣರ ಸಂಖ್ಯೆ ಶೂನ್ಯ
ಎಂದೇ ಹೇಳಬಹುದು. ಕೇವಲ ಕಲೆಗೆ ಮಾತ್ರ ಮನಸ್ಸು ಕೊಡದೆ ತತ್ವಗಳಿಗೂ
ಮನಗೊಡುವ ಕಲಾವಿದರ ಕೈಗೆ ಈ ಕೃತಿಗಳು ಸಿಕ್ಕಿದರೆ ಅವುಗಳ ಮೌಲ್ಯ, ಹಿರಿಮೆ
ಗರಿಮೆಗಳು ನಮಗೆ ಅರಿವಾಗುತ್ತದೆ. ಇಂದಿನ ಸಂಗೀತ ಕಲಾವಿದರು ತಮ್ಮ ಎಲ್ಲಾ
ಪರಿಧಿಯನ್ನು ಮೀರಿ ಈ ಕೃತಿಯಲ್ಲಿರುವ ಜೀವನ ಮೌಲ್ಯವನ್ನು ಜನತೆಯ ಮುಂದೆ
ಇಡುವ ಪ್ರಯತ್ನ ಮಾಡಿದರೆ ಶರಣರ ಕೊಡುಗೆ ಸಂಗೀತ ಪ್ರಪಂಚಕ್ಕೆ ಮಹತ್ವ
ಪೂರ್ಣವಾದುದು ಎಂಬುದು ವ್ಯಕ್ತವಾಗುತ್ತದೆ.

# ಸತ್ಯದ ಒಂದು ಪ್ರಖರ ಕಿರಣ

—ಟಿ. ಎನ್. ಮಹಾದೇವಯ್ಯ

ಓ ! ಕವಿ ಈ ನಿರಾಶೆಯಪಟ್ಟು ಬಹು ಆಳವಾಗಿ ನಿನ್ನ ಎಳೆ ಹೃದಯವನ್ನು ತಾ
ನೋಯಿಸಿತೆ ? ನಿನ್ನ ನಿಟ್ಟುಸಿರು, ಅನುಕಂಪ, ಉದ್ವೇಗ, ಆತುರ ಕಾತುರ ಕಳವಳ-
ಳೊಂದಿಗೆ ಸಮತೋಲವಾಗಿ ನರನಾಡಿಗಳು ಗತಿತಪ್ಪಿ ವಿದ್ವಲತೆಯಿಂದ ಕಂಪಿಸಿ ಕುಸಿದು
ಬಿಡುವೇ ಧಮನಿಯೊಂದರಿಂದ ದುಃಖದ ಆವೇಗವನ್ನು ತಡೆಯಲಾರದ ರಕ್ತ ರಣಧುನಿ
ಅಸಹಾಯಕವಾಗಿ ಸ್ರವಿಸಿತೆ ? ಆದರಸಂಗಡ ಹೃದಯ ಮೃತ್ಯುಯಾತನೆಯಲ್ಲಿ ಸಿಲ್ಕಿ
ತಪಿಸಿತೆ? ಕವಿ! ನಿನ್ನ ಸಂಕಟ, ನೋವುಗಳಿಗಾಗಿ ಯಾರೂ ಮರುಗುವುದಿಲ್ಲ! ……
ಯಾವ ನರನೆದೆಯೂ ಪ್ರೀತ್ಯಾನುಕಂಪಗಳಿಂದ ಬಿಸುಸುಯ್ದು ನಿನಗಾಗಿ ಪರಿ
ತಪಿಸುವುದಿಲ್ಲ! …….. ಗಿಡಮರಗಳು ನಿನ್ನ ಕನಸಿನ ಲೋಕದಲ್ಲಿ ಕಣ್ಣೀರಿಡುವಂತೆ
ನಿನಗಾಗಿ ಕಂಬನಿಗಳನ್ನು ಕರೆಯುವುದಿಲ್ಲ! ……. ಗಾಳಿ ತನ್ನ ಸಹಾನುಭೂತಿ ಪ್ರದ
ರ್ಶಿಸಿ ನಿನ್ನ ಮೈ ಸೋಂಕಲು ಮಂದಗತಿಯಿಂದ ಮುಂದುವರಿಯುವುದಿಲ್ಲ ! …………
ಲೋಕದನರನ ಕಣ್ಣಿನ ಗುಳಿಯಲ್ಲಿ ನಿನಗಾಗಿ ಒಂದೆರಡು ಕಣ್ಣೀರಿನಹನಿಗಳು ಸಹಸಂಚಿತ
ವಾಗುವುದಿಲ್ಲ ! … …. ಯಾವ ನರಹೃದಯದಲ್ಲಿ ಒಂದೇ ಒಂದು ಕರುಣೆಯ ರಸ-
ಬಿಂದುವೂ ದ್ರವಿಸುವುದಿಲ್ಲ…….. ಅದಕ್ಕೆ ಕಾರಣವೂ ಇಲ್ಲ ! … ಏಕೆ ಗೊತ್ತೆ? …
ಕಡಲಿನೋಟ ಅಂದ ಸೂರ್ಯರಶ್ಮಿಯಲ್ಲಿ ಬೆರೆತ ಹನಿಯೊಂದರ ನಿತ್ಯಯಾತನೆಯಲ್ಲಿ
ಜಲಸ್ವೇತದ ಅಪೂರ್ವ ಆನಂದಧಾರೆಯ ರಹಸ್ಯವು ಭವವಡಗಿದೆ ಗಿಡದ ಮೂಲೆ
ಯೊಂದರಲ್ಲಿ ಹೊಸ ಮುಸುಕಾಗಿ ಗರ್ಭಧರಿಸುವ ನೋವಿನಲ್ಲಿ ವೃಶ ಸೌರಭದ ಪರಿಮ
ಳದ ಗುಟಿ ಮನೆಮಾಡಿಕೊಂಡಿದೆ. (ಗೂಡು ಕಟ್ಟಿ ಕುಳಿತಿದೆ) ನಿನ್ನ ನರನಾಡಿ ದೇಹ
ದಾದ್ಯಂತವೂ ಕುಸಿದು ರಕ್ತದ ಹನಿ ತೊಟ ತೊಟನೆ ತೊಟ್ಟಿಡುವಾಗ ಆ ರಕ್ತ ಸೂಚನೆ
ಮನಸ್ಸಿನ ಮಿಶ್ರ ವಿಶಾಲವಾದ ಬಯಲಿನಲ್ಲಿ ನಟ್ಟು ಅನುಭವದ ಬೀಟೆವೊಂದರ ಒಡಲಲ್ಲಿ
ಹೊಸಜೀವ ರಸವಾಡುತ್ತದೆ! … … ನಿನ್ನ ನಿಟ್ಟುಸಿರು ಕರುನಿಗಳ ನಿತ್ಯ ಸ್ರೇತದಿಂದ
ಅದು ಪುಟಿದೆದ್ದು ಜೀವ ತಳೆದು ಲೋಕದತ್ತ ತನ್ನ ಎಳೆ ಕಣ್ಣುಗಳನ್ನು ಅರಳಿಸುತ್ತದೆ!…
ಆ ಪುಟ್ಟಗಿಡದಲ್ಲಿ ಒಂದು ನಂದನವನದ ಸುರಸುಂದರ ಸುಮ ಮಂದಾರ ದೃಶ್ಯವು ಅರಳಿ
ಬೃಹತ್‌ಕಾರವೂ ಕೆದರಿ ಜಗತ್ತಿಗೆ ಅಪೂರ್ವವಾದ ಪರಿಮಳದ ಆಘ್ರಾಣವನ್ನು ಬೀರು
ತ್ತದೆ. ದೃಶ್ಯ ಸೌರಭದ ಸುಖಸೇಟನದಿಂದ ಜೀವ ಆಹ್ಲಾದಗೊಳ್ಳುತ್ತದೆ. ಕವಿ !
ನಿನ್ನ ಹಿಂಸೆಯಾತನೆಗಳ ಈ ರುಧ್ರ ಸ್ಮಶಾನ ಭೂಮಿಯಲ್ಲಿ ನಡುಸೆ ಈ ಪ್ರಳಯ
ತಾಂಡವದಾಚೆ ಹೆಚ್ಚು ಹೊಸ ಜೀವದ ಚೈತನ್ಯ ಉಷಃ ಕಾಲದ ಮಯೂರ ನೃತ್ಯದಲ್ಲಿ
ನಿರತವಾಗುತ್ತದೆ. ಅವುದೋ ಒಂದು ಅಪೂರ್ವ ತತ್ವಸಂಗ್ರಹಕ್ಕಾಗಿ ಕಲೆ ಎಂಬುದು
ಕಿರಿಯ ಕಾಣಿಕೆಗಾಗಿ ನಿನ್ನ ಆತ್ಮೀಯವಾದ ಸಂರಕ್ಷೆಗಳನ್ನು ಸೃಷ್ಟಿ' ಅತ್ಯಂತ ನಿಷ್ಠುರ,
ನಿರ್ದಯ, ನೀರವತೆಗಳಿಂದನಿರೀಕ್ಷಿಸದೆ ಗತ್ಯಂತರವಿಲ್ಲನಿನ್ನ ಯಾತನೆಗೆ ಲೋಕ ನಗುತ್ತದೆ.
ನಗಬೇಕಾದರೆ ನಾನು ಅಳಬೇಕೆಂಬುದು ನಿಜವಾಗಿಯೂ ಸತ್ಯದ ಒಂದು ಪ್ರಖರ ಕಿರಣ.

ಸಿದ್ಧಗಂಗಾ



# 'ವೀರಶೈವದಲ್ಲಿ ಅಷ್ಟಾವರಣ'

—ಕುಮಾರಿ ಎಂ. ಗೀತಾ
ಸಂಸ್ಕೃತ ಉಪನ್ಯಾಸಕಿ, ಆಯುರ್ವೇದ ಕಾಲೇಜು, ಮೈಸೂರು.

ಪ್ರತಿಯೊಂದು ಪ್ರಾಣಿಯೂ ಸುಖವನ್ನು ಹೆಚ್ಚಿಸಿಕೊಳ್ಳಲು ಮತ್ತು ದುಃಖ
ವನ್ನು ಕಡಿಮೆ ಮಾಡಿಕೊಳ್ಳಲು ಇಚ್ಛಿಸುತ್ತದೆ. ಆದರೆ ಅಂತಹ ಸುಖಾನುಭವ
ದಲ್ಲಿ ಅಂತರವಿದೆ. ಊಟ ಮಾಡುವುದು, ಛಳಿಯಿಂದ ದೇಹವನ್ನು ಬೆಚ್ಚಗೆ
ಮಾಡಿಕೊಳ್ಳುವುದು, ಸುಶ್ರಾವ್ಯವಾದ ಸಂಗೀತವನ್ನು ಆಲಿಸುವುದು ಇವೆಲ್ಲವೂ
ಇಂದ್ರಿಯದ ಜನ್ಯಸುಖಗಳೆನಿಸುತ್ತದೆ. ಇಂದ್ರಿಯಗಳ ಜೊತೆ ಮನಸ್ಸೂ ಇದೆ
ಎಂಬುದನ್ನು ನಾವು ಮರೆಯುವ ಹಾಗಿಲ್ಲ. ಆ ಮನಸ್ಸಿನ ಸುಖವೇ ಬೇರೆಯಾದುದು.
ಉದಾಹರಣೆಗೆ:- ನಾವು ಒಳ್ಳೆಯ ಭಕ್ಷ್ಯ ಭೋಜ್ಯಗಳನ್ನು ಭುಂಜಿಸುತ್ತಿರುವಾಗ
ಯಾರಾದರೂ ನಿಂದಿಸಿದರೆ ಆ ಸವಿಯಾದ ಭೋಜನವನ್ನು ಬಿಟ್ಟು ನಿಂದೆಯಿಂದಾಗುವ
ದುಃಖವನ್ನು ಮಾತ್ರ ಅನುಭವಿಸುತ್ತೇವೆ. ಇದು ಮನಸ್ಸಿನ ದುಃಖವೆನಿಸುತ್ತದೆ.
ಅಥವಾ ಹೊಗಳಿದಾಗ ಆಗುವ ಸುಖವೂ ಮನಸ್ಸಿನ ಸುಖವೆನಿಸುತ್ತದೆ.

ಇವೆರಡಕ್ಕಿಂತ ಭಿನ್ನವಾದ ಸುಖವೆಂದರೆ ಬುದ್ಧಿಯ ಸುಖ. ಈ ಸುಖವೇ
ಬೇರೆ. ಈ ಬುದ್ಧಿ ತನಗೆ ಒದಗುವ ಸುಖಗಳನ್ನು ತಾತ್ಕಾಲಿಕ ಸುಖ, ಹಾಗೂ
ಶಾಶ್ವತ ಸುಖಗಳಿರುವ ಭೇದವನ್ನರಿಯಲು ಯತ್ನಿಸುತ್ತದೆ. ಮನುಷ್ಯರು ಜೀವನದ
ಗುರಿಯತ್ತ ಧಾವಿಸುವಾಗ ಅವರು ಅತಿಕ್ರಮಿಸುವ ಮಾರ್ಗ ದುರ್ಗಮವಾಗಿದ್ದರೂ
ಅದರಿಂದ ದುಃಖಿತನಾಗದೆ ಅಂತಹ ತಾತ್ಕಾಲಿಕ ಕಷ್ಟಗಳನ್ನು ಸಂತೋಷದಿಂದ
ಎದುರಿಸುತ್ತಾರೆ. ವಿಜ್ಞಾನಿಗಳು ಎದುರಿಸುವ ಸುಖವು ಬುದ್ಧಿಯ ಸುಖಕ್ಕೆ ಒಳ್ಳೆಯ
ಉದಾಹರಣೆಯಾಗುತ್ತದೆ.

ಈ ಮೂರು ಬಗೆಯ ಸುಖಗಳು ಅಶಾಶ್ವತವಾದುವು, ಬುದ್ಧಿಗೂ ಮೀರಿ
ಆತ್ಮವಿದೆ. ಆತ್ಮ ಸುಖ ವಿಶಾಲತೆಯನ್ನು ಕಾಣುವ ಸುಖ ತಾಯಿಯು
ಮಗುವನ್ನು ಮುದ್ದಾಡಿಸುತ್ತಾ ತನ್ಮಯಳಾಗಿ ತನ್ನನ್ನು ತಾನು ಮರೆ(ಮ. ಯುವ
ಸುಖ ಆತ್ಮಸುಖದ ಮುಂದೆ ಇತರ ಸುಖಗಳು ತುಚ್ಛ. ಭಯ ಮತ್ತು ಸ್ವಾರ್ಥ
ಗಳಿಂದ ದೂರವಾದಾಗಲೇ ಸುಖದ ಲಭ್ಯ ಮನುಷ್ಯನಿಗಾಗುತ್ತದೆ. ಮನುಷ್ಯ
ಇಂತಹ ಸುಖವನ್ನರುಸುತ್ತಾ ವಿಶಾಲತೆಯಲ್ಲಿ ತನ್ನನ್ನು ಲೀನಗೊಳಿಸಿಕೊಳ್ಳು

ತ್ತಾನೆ ಹೀಗೆ ಲೀನಗೊಳಿಸಿಕೊಳ್ಳುವುದಕ್ಕೆ ಮೊದಲು ತನ್ನಲ್ಲಿರುವ ಕಾಮ
ಕ್ರೋಧಗಳೆಂಬ ಅರಿಷಡ್ವರ್ಗಗಳ ಅನಾವರಣವಾಗಬೇಕು. ಸ್ವಾರ್ಥದ ಬೇಲಿಯನ್ನು
ಛೇದಿಸಬೇಕು. ಮತ್ತು ಮಮಕಾರವೆಂಬ ಕಳೆಯನ್ನು ನಿರ್ಮೂಲಗೊಳಿಸಬೇಕು.
ಆಗಲೇ ಜೀವಾತ್ಮದ ಮುಕ್ತಿ. ಭಾರತೀಯ ಸಂಸ್ಕೃತಿಯಲ್ಲಿ ಇಂತಹ ಮುಕ್ತಿಗೆ
ಅತಿಯಾದ ಪ್ರಾಶಸ್ತ್ಯವನ್ನು ದಾರ್ಶನಿಕರು ಕಲ್ಪಿಸಿದ್ದಾರೆ. ಇಂತಹ ಮೋಕ್ಷ ಯಾತ್ರೆಗೆ
ಬಂದು ನಿಶ್ಚಿತವಾದ ಮಾರ್ಗದರ್ಶನ ಬೇಕಾಗಿದೆ. ಇಂತಹ ಮಾರ್ಗದರ್ಶನಕ್ಕೆ
ಮುಖ್ಯವಾಗಿ ವಿಷಯಗಳೆಂಬ ಕಳ್ಳಕಾಕರಿಂದ ರಕ್ಷಣೆಯನ್ನು ಹೊಂದಬೇಕು. ಇವೆಲ್ಲವು
ಗಳಿಂದ ಸುರಕ್ಷಿತವಾಗಿ ಮುಕ್ತಿ ಮಾರ್ಗಕ್ಕೆ ಹೋಗುವ ಮುನ್ನ ನಮಗೆ ಭದ್ರವಾದ
ಒಂದು ಆವರಣವು ಬಹಳ ಮುಖ್ಯವಾದುದು. ಭದ್ರವಾದ ಕೋಟೆಯಿಂದ ರಾಜನಿಗೆ
ಹೇಗೆ ರಕ್ಷಣೆಯು ಒದಗುತ್ತದೋ ಹಾಗೆ ಮನುಷ್ಯನಿಗೂ ಆವರಣದ ರಕ್ಷಣೆ ಅತ್ಯಗತ್ಯ.

ವೀರಶೈವ ತತ್ವದಲ್ಲಿ ಇಂತಹ ಆವರಣಗಳನ್ನು ನಾವು ಗಮನಿಸಬಹುದಾಗಿದೆ.
ಜೀವನ ಉನ್ನತಿಗೋಸ್ಕರ ವೀರಶೈವದಲ್ಲಿ ಷಟ್‌ಸ್ಥಲ, ಪಂಚಾಚಾರಗಳು ಮತ್ತು
ಅಷ್ಟಾವರಣಗಳು ಬಹುಮುಖ್ಯವಾದುವುಗಳು. ಇಲ್ಲಿ ನಾವು ಕೇವಲ ಅಷ್ಟಾವರಣ
ಗಳನ್ನು ಮಾತ್ರ ವಿವೇಚಿಸೋಣ. ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ,
ವಿಭೂತಿ, ರುದ್ರಾಕ್ಷಿ, ಮಂತ್ರ ಇವುಗಳೇ ಮನುಷ್ಯನನ್ನು ರಕ್ಷಿಸಿ ಮುಕ್ತ ಪದದತ್ತ
ಒಯ್ಯುವ ಸ್ಥಾನಗಳು ಎಂಟು ಆವರಣಗಳು.

ಜೀವನೇ ಓರ್ವ ಯಾತ್ರಿಕನಾಗಿ, **ಲಿಂಗ** ವೆಂಬ ಪರಮ ಸ್ಥಾನವನ್ನರಸುವ
ಸಲುವಾಗಿ **ಗುರು** ವನ್ನು ತನ್ನ ಮಾರ್ಗದರ್ಶಕನನ್ನಾಗಿ ಅರಸುತ್ತಾ ಇಂತಹ
ಮಾರ್ಗ ದರ್ಶನದಲ್ಲಿ ನಡೆಯುತ್ತಿರುವಾಗ **ಜಂಗಮ** ವು ಇವನು ಅನ್ಯಮಾರ್ಗಕ್ಕೆ
ರಸದಂತೆಸದಾ ಇವನ ಮೇಲೆ ಎಚ್ಚರಿಕೆ ವಹಿಸಿ ಸನ್ಮಾರ್ಗದಲ್ಲಿ ತನ್ನ ಲಕ್ಷ್ಯದತ್ತ ನಡೆ
ಯುವಂತೆ ನೋಡಿಕೊಳ್ಳುತ್ತಾನೆ. ಹೀಗೆ ಪಯಣಿಸುವಾಗ ಮನಸ್ಸಿನಲ್ಲಿ ಪ್ರಶಾಂತತೆ ಮತ್ತು
ಅಚಲತೆಬಹು ಮುಖ್ಯವಾಗಿಬೇಕಾಗುತ್ತದೆ. ಅದಕ್ಕೆ **ಪ್ರಸಾದ** ತತ್ವವು ಮನುಷ್ಯನಲ್ಲಿರುವ
ಮಮಕಾರವೆಂಬ ಹಸಿವನ್ನು ಕಳೆದು ಪ್ರಶಾಂತ ಚಿತ್ತವನ್ನು ಸ್ಥಾಪಿಸುತ್ತದೆ. ಆಧ್ಯಾ-
ತ್ಮಿಕ ಆದಿಭೌತಿಕ ಮತ್ತು ಆದಿದೈವಿಕ ವೆಂಬ ತಾಪತ್ರಯಗಳ ಬಾಯಾರಿಕೆಯನ್ನು
ಹೋಗಲಾಡಿಸುವುದೇ **ಪಾದೋದಕತತ್ವ**. ಮರ್ಕಟನಂತೆ ಅತ್ತಿತ್ತ ಸುಳಿಯ ಬಯ-
ಸುವ ಬಹಿರ್ಮುಖವಾದ ಮನಸ್ಸನ್ನು ಶುಚಿಗೊಳಿಸಿ ಲಿಂಗ ಮುಖಿಯನ್ನಾಗಿ ಮಾಡು-
ವುದೇ ದಿವ್ಯ "**ಮಂತ್ರ**" ಅಂತಹ ಸ್ಥಿತಿಯಲ್ಲಿ ಮನುಷ್ಯನಿಗೆ ಆಕಸ್ಮಿಕವಾಗಿ ಒದಗ
ಬಹುದಾದ ವಿಷಯಗಳೆಂಬ ಕಳ್ಳಕಾಕರಿಂದ ತಪ್ಪಿಸಿಕೊಳ್ಳಲು ಜೀವನು **ವಿಭೂತಿ**
ಮತ್ತು ರುದ್ರಾಕ್ಷಿಗಳ ಮರೆ ಹೋಗಬೇಕಾಗುತ್ತದೆ. ಈ ರೀತಿ ಜೀವನು ತಾನು
ಹೋಗಬಯಸುವ ಮುಕ್ತಿ ಜೊತೆಯಲ್ಲಿ ಜಯವನ್ನು ಗಳಿಸಲು ಮತ್ತು ಲಿಂಗ ಕ್ಷೇತ್ರ
ವನ್ನು ಅಥವಾ ತುರೀಯಬ್ರಹ್ಮನನ್ನು ಹೊಂದಲು ವೀರಶೈವತತ್ವದಲ್ಲಿ ಅತಿಯಾದ
ಪ್ರಾಶಸ್ತ್ಯವನ್ನು ನಾವು ಕಾಣಬಹುದು.



ಈಗ ಈ ಅಷ್ಟಾವರಣಗಳನ್ನು ಒಂದೊಂದಾಗಿ ವಿವೇಚಿಸೋಣ.

ಗುರು: ಹಿಂದೆಯೇ ತಿಳಿಸಿದಂತೆ ಜೀವನೆಂಬಯಾತ್ರಿಕನಿಗೆ "**ಲಿಂಗ**" ಕ್ಷೇತ್ರವನ್ನು
ತಲುಪಿಸಲು ಗುರು ಬಹಳಮುಖ್ಯವಾದ ಸ್ಥಾನವನ್ನುಗಳಿಸಿದ್ದಾನೆ. ಇಂತಹ ಗುರುಗಳು
ಸಿಗುವುದು ಸುಲಭ ವಾದುದೇನಲ್ಲ. ಅಂತೆಯೇ ಗುರುವಿನ ಲಕ್ಷಣವನ್ನು ಹೇಳುತ್ತಾ
"ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಿಲಾಖಯಾ .... ಎಂಬಂತೆ ಗುರುವಾದವನ್ನು
ಶಿಷ್ಯನಿಗೆ ಶಿವಜ್ಞಾನವೆಂಬ ಅಂಜನವನ್ನು ಹಚ್ಚಿ ಅಜ್ಞಾನವನ್ನು ಹೋಗಲಾಡಿಸುತ್ತಾನೆ.
ಇಷ್ಟೇಅಲ್ಲದೆಶಿಷ್ಯನಿಗೆ ದೀಕ್ಷೆಯನ್ನು ಕೊಡುವುದರ ಮೂಲಕ ಆಣವಮಲಮಾಯಾಮಲ
ಕಾರ್ಮಿಕ ಮಲಗಳನ್ನು ನಿರ್ಮೂಲನಗೊಳಿಸಿ ತನ್ಮೂಲಕ ಜೀವನವನ್ನು ಶುದ್ಧಗೊಳಿಸಿ
ಲಿಂಗ ಕ್ಷೇತ್ರಯಾತ್ರೆಗೆ ಪರಿಶುದ್ಧನನ್ನಾಗಿ ಮಾಡುತ್ತಾನೆ. ಹಾಗೆ ಮಾಡಿದ ಬಳಿಕ
ಶಿಷ್ಯನಲ್ಲಿ ಸುಪ್ತವಾಗಿರುವ ಅಭೀಪ್ಸೆಯನ್ನು ಜಾಗ್ರತಗೊಳಿಸಿ ಹಸ್ತ ಮಸ್ತಕ ಸಂಯೋ
ಗದಿಂದ ಉನ್ಮೀಲನಗೊಳಿಸಿ ಶಿಷ್ಯನಲ್ಲಿ ಆಧ್ಯಾತ್ಮಿಕ ಅರಿವನ್ನು ಮೂಡಿಸುತ್ತಾನೆ ಮತ್ತು
ಶಿಷ್ಯನಲ್ಲಿ ಹುದುಗಿರುವ ಚಿತ್ಕಲೆಯನ್ನು ಇಷ್ಟಲಿಂಗದಲ್ಲಿ ಬೆರೆವಂತೆಮಾಡಿ ಲಿಂಗದ
ನಿಜವಾದ ನೆಲೆಯನ್ನು ಅವನಿಗೆ ಅರುಹುತ್ತಾನೆ.

"ಅರಿವಿನ ಬಂಧನದಲ್ಲಿರಿಸಿದಾತನೇ ಗುರು" ಎಂಬುದಾಗಿ
ಶರಣಸಿದ್ಧರಾಮಾನು "ಅರಿವಿನ ಬಂಧನದಲ್ಲಿರಿಸಿದಾತನೇ ಗುರು" ಎಂಬುದಾಗಿ
ಗುರುವಿನ ಲಕ್ಷಣವನ್ನು ಸಮರ್ಥಿಸಿದ್ದಾನೆ. ಭೂಮಿಯಲ್ಲಿ ಇಟ್ಟಬೀಜವು ಅಂಕುರ
ವಾಗಬೇಕಾದರೆ ಆ ಭೂಮಿಯ ಮಣ್ಣು ಪುಡಿ ಪುಡಿಯಾಗಿ ಕುಂಕುಮಚೂರ್ಣದಂತೆ
ಹದನಾಗಿರಬೇಕು. ಅಂತೆಯೇ ಗುರುವು ಬಿತ್ತಿದ ಶಿವಮಂತ್ರ ಫಲಿಸಬೇಕಾದರೆ ಶಿಷ್ಯನ
ಹೃದಯವೆಂಬ ನೆಲವು ಹಂಕಾರ ಮಕಾರಗಳೆಂಬ ಹೆಂಟೆಗಳಲ್ಲಿದೆ ಸಮತೆ ಸಮಾಧಾನ
ವೆಂಬ ಪುಡಿಮಣ್ಣಿನಿಂದ ಕೂಡಿರಬೇಕು ಈ ರೀತಿಯಾಗಿ ಮನಸ್ಸನ್ನು ಸಮತೆಗೆ ತರುವು
ದೇ, ಮನಸ್ಸನ್ನು ಶುದ್ಧಗೊಳಿಸುವುದೇ ಗುರುವಿನ ಆದ್ಯಕರ್ತವ್ಯ. ಹಾಗಲ್ಲದೆ ಶಿಷ್ಯನಿಗೆ
ಬೋಧಿಸುವುದು ಶರಣರು ಹೇಳುವಂತೆ "ಮಣ್ಣಪುತ್ಥಳಿಯ ಜಲದಲ್ಲಿ ತೊಳೆದಂತಾ"
ಗುತ್ತದೆ. ಕೇವಲ ಗುರುವಿನ ಅನುಗ್ರಹದಿಂದಲೇ ಎಲ್ಲವೂ ಉಂಟಾಗಲಾರದು
"ಉದ್ಧರೇದಾತ್ಮಾನಾತ್ಮನಂ" ಎಂದು ಗೀತೆಯಲ್ಲಿ ಹೇಳಿರುವಂತೆ ಶಿಷ್ಯನು ತನ್ನ
ಸಾಧನೆಯಿಂದ ಗುರುವು ಇತ್ತ ಅನುಗ್ರಹವನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಒಟ್ಟ
ನಲ್ಲಿ ಗುರು ಶಿಷ್ಯರ ಸಂಬಂಧ ಕರ್ಪೂರದ ಜ್ಯೋತಿಯಂತೆ ಸಮರಸತೆಯನ್ನು ಹೊಂದ-
ಬೇಕು. ಆಗ ಮಾತ್ರ ಗುರುವಿನ ಅನುಗ್ರಹ ಶಿಷ್ಯನಿಗೆ ಸಂಪೂರ್ಣ ದೊರೆಯುತ್ತದೆ.

ಇದರ ಉಗಮವು ಸುಮಾ
**ಲಿಂಗ** : ಲಿಂಗದ ಕಲ್ಪನೆ ಅತ್ಯಂತಪ್ರಾಚೀನವಾದುದು, ಇದರ ಉಗಮವು ಸುಮಾ
ರು ಆರುಸಾವಿರ ವರ್ಷಗಳ ಹಿಂದೆಯೇ ಪ್ರಸಿದ್ಧವಾದ ಸಿಂಧೂ ನದಿಯ ನಾಗರೀಕತೆಯ
ಲ್ಲಿ ಕಾಣಿಸಿಕೊಂಡು ನಂತರ ಮಹಾಭಾರತ, ಶೈವಾಗಮಗಳಲ್ಲಿ ವಿಕಾಸವನ್ನು ಹೊಂದಿದ

ಲಿಂಗ ತತ್ವದ ಸಂಪೂರ್ಣ ವಿವರವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ನೋಡಬಹುದಾ
ಗಿದೆ. “ಲೀಯತೇ. ಗಮ್ಯತೇ” ಎಂಬುದಾಗಿ ಲಿಂಗ ತತ್ವವನ್ನು ಹೇಳಿ ಯಾವ ವಸ್ತು
ವಿನಲ್ಲಿ ಚರಾಚರ ಜಗತ್ತು ಲಯವನ್ನು ಹೊಂದಿ ಮತ್ತೆ ಅದರಲ್ಲೇ ಉತ್ಪತ್ತಿ ಹೊಂದು
ತ್ತದೆ. ಅದೇ ‘ಲಿಂಗ, ಎಂಬ ವಿವರಣೆ ಇದೆ. “ಲಿಂಗ ಮಧ್ಯೇ ಜಗತ್ಸರ್ವಂ” ಎಂಬುದೂ
ಆಮಾತನ್ನೇ ದೃಢೀಕರಿಸುತ್ತದೆ, ಮುಂದುವರೆದು ಇದರ ವಿರಾಟ ಸ್ವರೂಪವನ್ನು
ನಮ್ಮ ಶರಣರು ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ....ಎಂಬ ಮಾತಿನಲ್ಲಿ
ಲಿಂಗ ತತ್ವದ ನಿಜಸ್ವರೂಪವನ್ನು ತಿಳಿಯಪಡಿಸಿದ್ದಾರೆ. ಇದಲ್ಲದೆ ಇಷ್ಟಲಿಂಗದ ನಿರ್ವಚ
ನದಂತೆ ಇಷ್ಟಲಿಂಗಮಿದಂ ಸಾಕ್ಷಾತ್ ಅನಿಷ್ಟ ಪರಿಹಾರಕಂ ಎಂದರೆ ನಿತ್ಯದಲ್ಲಿ
ಯಾವುದು ಪೂಜಿಸಲ್ಪಡುವುದೋ ಅದೇ ಇಷ್ಟವು ಅಂತಹ ಇಷ್ಟ
ವಸ್ತುವೇ ಇಷ್ಟಲಿಂಗ ಅದು ಅನಿಷ್ಟ (ಪಾಪ) ಪರಿಹಾರಕದ ಸಾಧನವೂ ಆಗಿದೆ ಎಂದು
ಹೇಳಲ್ಪಟ್ಟದೆ. ಪ್ರಾಣಲಿಂಗ, ಭಾವಲಿಂಗಗಳನ್ನರಿಯಲು ಇಷ್ಟಲಿಂಗ ಮುಖ್ಯ ಸಾಧನ
ವಾಗಿದೆ ಸಾಕಾರದಿಂದ ನಿರಾಕಾರಕ್ಕೇರುವ ಮಾರ್ಗವೇ ಇಷ್ಟಲಿಂಗೋಪಾಸನೆಯ ಗುರಿ.
ನೋಟಕ್ಕೆ ಸಾಕಾರವಾದರು ಇದರ ಮೂಲ ನಿರಾಕಾರದಲ್ಲಿದೆ. ಇದನ್ನು ಮೂರ್ತಿಪೂಜೆಯೆಂ
ದು ಪರಿಗಣಿಸುವಹಾಗಿಲ್ಲ ಇಲ್ಲಿ ದ್ವೈತಭಾವನೆಯೇ ಬರುವುದಿಲ್ಲ. ಸಾಧಕನ ಹೃದಯಕಮ
ಲದ ಬೆಳಗೇ ಇದು. ಆ ಬೆಳಕಿನಲ್ಲಿ ಸಾಧಕನು ತನ್ನನ್ನು ಎಂದರೆ ತನ್ನ ನಿಜ ಸ್ವರೂಪವನ್ನು
ಕಂಡುಕೊಳ್ಳುತ್ತಾನೆ.

ಕನ್ನಡಿಯನ್ನು ನೋಡುವ ಅಂಗನೆ ವಾಸ್ತವಿಕವಾಗಿ ನೋಡುವುದು ಕನ್ನಡಿ
ಯನ್ನಲ್ಲ. ಅದರಲ್ಲಿ ಕಾಣುವ ತನ್ನ ರೂಪವನ್ನು ಮಾತ್ರ. ಹಾಗೆ ಸಾಧಕನ ಆತ್ಮ
ಸ್ವರೂಪವನ್ನು ಪ್ರತಿಬಿಂಬಿಸುವ ಕನ್ನಡಿ ಇಷ್ಟ ಲಿಂಗ.

ಲಿಂಗದ ಮೇಲೆ ಹೊಳೆಯುವ ಕಪ್ಪುಕಂತೆ ಏಕಾಗ್ರತೆಯಿಂದ ದಿಟ್ಟಿಸುವಾಗ
ದೃಷ್ಟಿಯನ್ನು ಆಕರ್ಷಿಸಿ ಮನಸ್ಸನ್ನ ಲಿಂಗದ ಮೇಲೆ ಕೇಂದ್ರೀಕರಿಸಲು ಸಹಾಯ
ವಾಗಿದೆ: ಇಷ್ಟಲಿಂಗ ತತ್ವದ ಮತ್ತೊಂದು ಮುಖ್ಯ ಅಂಶವೆಂದರೆ ಧಾರ್ಮಿಕ ಸ್ವಾತಂತ್ರ್ಯ.
ಇಷ್ಟಲಿಂಗವನ್ನು ಧರಿಸಿದವನು ತನ್ನ ಆತ್ಮದ ಉದ್ಧಾರಕ್ಕಾಗಿ ಪುರೋಹಿತರನ್ನು
ಕಾಯಬೇಕಾಗಿಲ್ಲ ಅವನ ಉದ್ಧಾರ ಅವನ ಕೈಯಲ್ಲೇ ಇರುತ್ತದೆ. ಹೀಗೆ ಲಿಂಗ
ತತ್ವವು ವೀರಶೈವ ಧಾರ್ಮಿಕ ತತ್ವಕ್ಕೆ ತಳಹದಿಯಾಗಿ ಸಾಮಾಜಿಕ ನೀತಿಯ ಕೇಂದ್ರ
ವಾಗಿ ಎಲ್ಲರಲ್ಲಿ ಸಮಾನತೆಯನ್ನು ಸಾಧಿಸಲು ಸಾಧನವಾಗಿದೆ.

**ಜಂಗಮ:** ಜಂಗಮತತ್ವ ವೀರಶೈವದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಗುರು
ವಾದವನು ಭಕ್ತನ ಅನುಗ್ರಹಕ್ಕೆ ಒಂದೆಡೆ ಇರುವವನಾದರೆ, ಜಂಗಮ ಅನಂತನಾದ
ವನು. ಅವನಿಗೆ ಸ್ಥಾನದಮಿತಿಯಲ್ಲಿ ಗುರುವಿನಿಂದ ಲಿಂಗವನ್ನು ಪಡೆದ ಸಾಧಕನಲ್ಲಿ



ಅಚಲ ನಿಷ್ಠೆಯನ್ನು ತನ್ನ ಅತೀತನಿಲುವಿನಿಂದ ಪ್ರಚೋದಿಸುತ್ತಾನೆ. ಸಿದ್ಧರಾಮನ–
ಮಾತಿನಲ್ಲಿ ಹೇಳಬೇಕಾದರೆ “ಜಂಗಮ ಇಂದ್ರಿಯ ವಿಕಾರ ರಹಿತ ಸ್ತ್ರೀ – ಅಂಧಕ
ಪರಧನ– ಧೀತ, ವಿಷಯದಲ್ಲಿ ನಿಷ್ಕರುಣೆ” ಇಂತಹ ಜಂಗಮನು ಭಕ್ತನಿಗೆ ಅವನಲ್ಲಿ
ರುವ ಇತಿಮಿತಿಯನ್ನು ತೋರಿಸಿ ಅವನಮುನ್ನಡೆಗೆ ಕಾರಣನಾಗುತ್ತಾನೆ. ಮತ್ತು
ಭಕ್ತನ ಭವರೋಗಕ್ಕೆ ಮಡಿವಾಳನಾಗುತ್ತಾನೆ. ಶರಣರು ಹೇಳುವಂತೆ ಗುರುವಿನ
ಉಪದೇಶ ಮಂತ್ರ ವೈದ್ಯನಾದರೆ ಜಂಗಮ ಉಪದೇಶ ಶಸ್ತ್ರವೈದ್ಯಎಂಬಮಾತಿನಲ್ಲಿ
ಜಂಗಮದ ಪ್ರಾಧಾನ್ಯತೆ ವ್ಯಕ್ತವಾಗುತ್ತದೆ. ಜಂಗಮಕ್ಕೆರೆದರೆ ಸ್ಥಾವರ ನೆನೆದಿತ್ತು
ಎಂಬ ಜಂಗಮ ಸೇವೆ ಇಲ್ಲದೆ ಲಿಂಗ ಸಾಧನೆ ಪೂರ್ಣವಾಗಲಾರದು ಎಂಬ ತತ್ವವನ್ನು
ಸ್ಪಷ್ಟಪಡಿಸುತ್ತದೆ. ಹೀಗೆ ಲಿಂಗ ಜಂಗಮದ ಸಂಬಂಧ ಸಕ್ಕರೆಯಲ್ಲಿ ಸಿಹಿ ಸೇರಿದಂತೆ.
ಬೆಣ್ಣೆಯಲ್ಲಿ ಘೃತಬೆರೆತಂತೆ ಅಭೇದ್ಯವೆ. ಗುರುವಿನಿಂದ ಲಿಂಗವನ್ನು ಪಡೆದ ಭಕ್ತ ತನ್ನ
ಸಾಧನೆಯಿಂದ ಜಂಗಮನಾಗುತ್ತಾ. ಅವನೂ ಗುರುವಿಗೆ ಸಮಾನನಾಗುತ್ತಾನೆ. ಭಕ್ತ
ನಾದವನು ಗುರುವಿನ ಕಾರುಣ್ಯದಿಂದ ಉಪದೇಶಯುಕ್ತನಾದರೆ ಜಂಗಮದ ಕಾರುಣ್ಯ
ದಿಂದ ಅನುಭವಿಯಾಗುತ್ತಾನೆ. ಹೀಗೆ ಜಂಗಮ ತತ್ವ ವಿಶಾಲ ತತ್ವದಮೇಲೇ
ನೆಲೆಗೊಂಡಿದೆ.

**ಪಾದೋದಕ :** ಸಿದ್ಧಾಂತ ಶಿಖಾಮಣಿಯಲ್ಲಿ “ಪರಮಾನಂದ ಏವೋಕ್ತಃ – –
ಪಾದಶಬ್ದೇನ ನಿರ್ಮಲಃ.......... ಎಂಬಂತೆ ಪಾದಶಬ್ದಕ್ಕೆ ಪರಮಾನಂದವೆಂತಲೂ
ಉದಕ ಶಬ್ದಕ್ಕೆ ಜ್ಞಾನವೆಂತಲೂ ನಿರ್ದೇಶಿಸಲ್ಪಟ್ಟದೆ. ಪಾದಶಬ್ದೇನ ಗುರುದೇಪ,
ನಿಗದ್ಯತೇ, ಎಂದರೆ ಪಾದಶಬ್ದವು ಗುರುವನ್ನೂ ಉದಕ ಶಬ್ದವು ಶಿಷ್ಯನನ್ನೂ
ನಿರ್ದೇಶಿಸುತ್ತದೆ. ದೀಕ್ಷಾ ವಿಶೇಷದಿಂದ ಸಂಭವಿಸುವ ಇವರೀರ್ವರ ಐಕ್ಯವೇ
ಪಾದೋದಕ: ಗುರುಶಿಷ್ಯರ **ಆನಂದ** ಐಕ್ಯವೇ ಪಾದೋದಕವೆಂತಲೂ,
**ಸ್ವರೂಪೈ ಕೃವೇಶೀಷಾ** ಪಾದೋದಕವೆಂತಲೂ ಗುರುವಿನ ಅಖಂಡ ಜ್ಞಾನದಲ್ಲಿ
ಶಿಷ್ಯನ ಜ್ಞಾನದ ಸಮರಸತೆಯೇ ಜ್ಞಾನ ಪಾದೋದಕವೆಂದೂ ಪ್ರಸಿದ್ಧಿಯಾಗಿದೆ.
ಇವುಗಳನ್ನು ಪಡೆಯುವ ಕ್ರಮವಾದ ಸ್ಪರ್ಶದೋದಕವೇ ಮೊದಲಾದ 7 ವಿಧಗಳೂ
ಕೂಡಿ ಒಟ್ಟು ಹತ್ತು ವಿಧಗಳಾಗಿವೆ, ಇಲ್ಲಿ ಕಂಡುಬರುವ ವಿಷಯವೆಂದರೆ ಲಿಂಗ
ಪೂಜೆಯಲ್ಲಿ ಗುರು, ಜಂಗಮದ ಅನಿವಾರ್ಯತೆ. ಇದರ ಮಹಿಮೆಯನ್ನು ವರ್ಣಿಸುತ್ತಾ
“ಅಯ್ಯಾ ಪಾದಪೂಜೆ ಎಂಬುದು ಅಗಮ್ಯ, ಅಗೋಚರ, ಅಪ್ರಮಾಣ ಇದರಿಂದ
ಸಂಚಿತ ಹಾಗೂ ಆಗಾಮಿ ಕರ್ಮಗಳು ನಾಶವಾಗುತ್ತವೆ ಎಂದೂ” ಲಿಂಗ ಪಾದೋದಕ
ಧರಿಸಿ ಮರಳಿ ಅಪವಿತ್ರ ಶಂಕೆಯಿಂದ ಆಚಮನವ ಮಾಡಿದಡೆ ಅಘೋರ ನರಕ
ದಲ್ಲಿಕ್ಕುವುಯ್ಯಾ “ಎಂಬ ಮಾತಿನಲ್ಲಿ ಪಾದೋದಕದ ವಿಶಿಷ್ಟವಾದ ಪಾವಿತ್ರ್ಯತೆ
ಹಾಗೂ ಮಹತ್ವವನ್ನು ಹೇಳಿದಂತಾಗಿದೆ.”

ಪ್ರಸಾದ: "ಮನಃ ಪ್ರಸಾದಯೋಗೇನ" ಎಂಬಂತೆ ಮನಸ್ಸಿನ ನಿರ್ಮಲತ್ವದ
ಚಿಹ್ನೆಯೇ ಪ್ರಸಾದವೆನಿಸುತ್ತದೆ. ಇಡೀ ಸೃಷ್ಟಿಯೇ ಈಶ್ವರನ ಪ್ರಸಾದ ಈ ಒಂದು
ಸೃಷ್ಟಿಯು ತಾನೇ ಈಶ್ವರನಿಗೆ ಪ್ರಸಾದವಾಗಿ ಪರಿಣಮಿಸುವುದು ಈ ನಿಲುವನ್ನು
ಸಾಧಿಸುವುದೇ ಪ್ರಸಾದದ ವೈಶಿಷ್ಟ್ಯ. ಇದು ಅರ್ಪಣಾ ಮನೋಭಾವದ ಆಧಾರವ
ಮೇಲೆ ನಿಂತಿದೆ. ಇದೇ "ಒಳ ಹೊರಗೆ ತೆರಹಿಲ್ಲದೆ, ಲಿಂಗಕ್ಕೆ ಅಂಗವನರ್ಪಿಸಿ
ಪ್ರಸಾದವ ಗ್ರಹಿಸಿ ಘನಲಿಂಗವಾಗಿರ್ಪ ಮಹಾಪ್ರಸಾದಿಯ ಕಲ್ಪಿಸಿ, ಬಾಹ್ಯ ಪದಾರ್ಥ
ಗಳನ್ನು ಜಂಗಮಕ್ಕೆ ಅರ್ಪಿಸಿ ಪ್ರಸಾದವನ್ನಾಗಿ ಪರಿವರ್ತಿಸಿ ಅದರಿಂದ ಪ್ರಸನ್ನತೆ
ಯನ್ನು ಪಡೆಯುವುದು. ಬಹಿರಂಗ ಪ್ರಸಾದವೆನಿಸಿದರೆ, ಮನಸ್ಸಿನ ನೈರ್ಮಲ್ಯ
ವನ್ನು ಶಿವನಿಗರ್ಪಿಸುವುದೇ ಅಂತರಂಗ ಪ್ರಸಾದ. ಗುರುವಿನಲ್ಲಿ ಶುದ್ಧ ಪ್ರಸಾದ
ಲಿಂಗದಲ್ಲಿ ಸಿದ್ಧ ಪ್ರಸಾದ, ಜಂಗಮದಲ್ಲಿ ಪ್ರಸಿದ್ಧ ಪ್ರಸಾದ, ಗುರು ಮುಖದಿಂದ
ಬಂದ ಪ್ರಸಾದದಿಂದ ತನು ಶುದ್ಧ, ಲಿಂಗದಿಂದ ಮನಶುದ್ಧ, ಜಂಗಮ ಪ್ರಸಾದ
ಪ್ರಾಣ ಶುದ್ಧ, ಈ ತ್ರಿವಿಧ ಪ್ರಸಾದವಕೊಂಡು ಎನ್ನ ಭವ ಹಿಂಗಿತ್ತು ಎಂಬ ಶರಣರ
ವಚನದಲ್ಲಿ ಪ್ರಸಾದದ ಮಹಿಮೆಯು ಅರಿವಾಗುತ್ತದೆ. ಪ್ರಸಾದಕ್ಕೆ ಈ ಒಂದು
ಶಕ್ತಿ ಬರುವುದು ಆಚರಿಸುವ ಭಾವನೆಯಿಂದ. ನಾಲಿಗೆಯ ಚಪಲಕ್ಕಾಗಿ ಬಯ
ಸುವ ಆಸೆ ಸಲ್ಲದು, ಶರಣರ ಮಾತಿನಂತೆ ಒಲ್ಲವೆಂಬ ವೈರಾಗ್ಯವಿಲ್ಲ, ಉಂಡೆವೆಂಬ
ಬಯಕೆಯೂ ಇಲ್ಲ. ತಾನಿದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿ-
ಸುವುದೇ ಆಚಾರ.

ನಾವು ಸ್ವೀಕರಿಸುವ ಆಹಾರ ಹೊಟ್ಟೆತುಂಬಿಸಿ ದೇಹವನ್ನು ಬೆಳೆಸುವುದಕ್ಕಲ್ಲ.
ಅದು ದೇಹವನ್ನು ಪರಿಶುದ್ಧಗೊಳಿಸಿ ಮನಸ್ಸಿನ ಪವಿತ್ರತೆಗೆ ಕಾರಣವಾಗಬೇಕು ಇದನ್ನೇ
ಶರಣರು "ಲಿಂಗಾರ್ಪಿತವಲ್ಲದೆ ಉದಕವ ಮುಕ್ಕಳಿಸಿದೆನಾದರೆ ಸಲ್ಲೆನುನಿಮ್ಮಗಣಾಚಾ
ರಕ್ಕೆ" ಎಂದು ಹೇಳಿರುತ್ತಾರೆ.

ಇಂತಹ ಪ್ರಸಾದವನ್ನು ಸ್ವೀಕರಿಸುವುದರಲ್ಲಿ ಶರಣರು ಒಂದು ನಿಯಮವನ್ನು ಹಾಕಿದ್ದಾರೆ
"ಉಂಡುಉಳಿಸಬಾರದು. ಅನ್ನದ ಬಂದು ಅಗಳೂಪವಿತ್ರವಾದುದು. ಅನ್ನಂಬ್ರಹ್ಮೇತಿ
ಪ್ರಜಾನಾತ್ " ಎಂಬ ಉಪನಿಷತ್ತತ್ವವನ್ನೆ ಶರಣರು ಪ್ರತಿಪಾದಿಸಿದ್ದಾರೆ. ವೀರಶೈವದ
ಈ ಪ್ರಸಾದ ತತ್ವ ಹಿಂದಿಗಿಂತಲೂ ಇಂದು ಈ ಅಧುನಿಕ ನಾಗರೀಕತೆಯಲ್ಲಿ ಅತ್ಯಂತ
ವಿಶಿಷ್ಟಸ್ಥಾನವನ್ನು ಪಡೆದಿದೆ. ಪ್ರಸಾದದಮಹತ್ವ ಎಲ್ಲಿಯವರೆಗೆ ಹೋಯಿತೆಂದರೆ
ಎಲೆಯಲ್ಲಿ ಊಟ ಮಾಡಬಾರದು, ಊಟ ಮಾಡುವಾಗ ಅತ್ತಿತ್ತ ಸಿಡಿಯದಂತೆ
ಎಚ್ಚರಿಕೆ ವಹಿಸಬೇಕು ಎನ್ನವವರೆಗೂ ಹೋಯಿತು. ಪ್ರಸಾದಸೇವನೆಯಲ್ಲಿ ಶರಣರು
ವಿಜ್ಞಾನದ ಮನೋಭಾವನೆಯನ್ನು ಮೈಗೂಡಿಕೊಂಡಿದ್ದಾರೆ. ಪ್ರಸಾದವನ್ನು ತೆಗೆದು
ಕೊಳ್ಳುವಾಗ ನಮ್ಮಮನೋಧರ್ಮಹೇಗಿರುತ್ತದೋ ಅದೇ ಭಾವನೆ ನಮ್ಮಲ್ಲಿ ಮೈಗೂ





ಡುತ್ತದೆ ಇದನ್ನೇ ಶರಣರು 'ಉಣ್ಣುವಾಗ ದೇವನ ಸ್ವರೂಪವಜ್ಞಾಪಿಸಿ ಕೊಂಡು
ಲಿಂಗಾರ್ಪಿತವ ಮಾಡಿದಬಳಿಕ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು ' ಎಂದು ಹೇಳಿ
ರುತ್ತಾರೆ ಹೀಗೆ ಪ್ರಸಾದ ತತ್ವದಲ್ಲಿ ಅಹಂಕಾರನಿರಸವಕ್ಕೆ ಕಾರಣವಾದ ಅರ್ಪಣ ತತ್ವ
ಅಡಗಿದೆ.

ವಿಭೂತಿ : ವೀರಶೈವ ತತ್ವದಲ್ಲಿ ವಿಭೂತಿ, ರುದ್ರಾಕ್ಷಿಗಳನ್ನು ಅಂತರಂಗದ ಅನುಭ
ವಕ್ಕೆ ಪ್ರೇರಕವಾಗುವಂತೆ ಅಳವಡಿಸಿ ಕೊಳ್ಳಲಾಗಿದೆ. ವಿಭೂತಿಯು ಶಿವನ ಸ್ವರೂಪ
ವನ್ನು ಪ್ರಕಾಶಗೊಳಿಸುವುದರಿಂದ ಇದು ಶಿವನ ದಿವ್ಯತೇಜಸ್ಸೇ ಎಂದು ಪರಿಗಣಿಸಲ್ಪ
ಟ್ಟಿದೆ. ಈ ಮಾತನ್ನು ದೃಢೀಕರಿಸಲೋಸುಗ ಅಲ್ಲಮ ಪ್ರಭುಗಳ "ಚಂದ್ರಮನಕಾಂಬು
ದಕ್ಕೆ ಚಂದ್ರಮನಬೆಳಗೇಮುಖ್ಯ, ಜ್ಯೋತಿಯ ಕಾಂಬುದಕ್ಕೆ ಜ್ಯೋತಿಯ ಬೆಳಗೇ
ಮುಖ್ಯ. ನಮ್ಮ ಗುಹೇಶ್ವರಲಿಂಗವ ಕಾಂಬುದಕ್ಕೆ ಅವನ ದಿವ್ಯತೇಜದಿಂದೊದಗಿದ ಭಸಿ
ತವೇ ಮುಖ್ಯ" ಎಂಬ ಮಾತನ್ನು ಹೇಳಿರುತ್ತಾರೆ.

ಹೀಗೆ ಶಿವನದಿವ್ಯ ತೇಜಸ್ಸಿನ ಸಂಕೇತವಾದ ವಿಭೂತಿಯನ್ನು "ವಿಭೂತಿ, ಭಸಿತ
ಭಸ್ಮ, ಕ್ಷಾರ, ರಕ್ಷಾ ಎಂಬುದಾಗಿ ಹೆಸರಿಸಿದ್ದಾರೆ ಅಷ್ಟೈಶ್ವರ್ಯಗಳಿಗೆ ಕಾರಣವಾಗುವುದ
ರಿಂದ ಇದನ್ನು "ವಿಭೂತಿ" ಯೆಂತಲೂ ಶಿವ ತತ್ವವನ್ನು ಪ್ರಕಾಶ ಪಡಿಸುವುದರಿಂದ
"ಭಸಿತ" ವೆಂತಲೂ ಸಮಸ್ತ ಪಾಪಗಳನ್ನೂ ನಾಶಪಡಿಸುವುದರಿಂದ "ಭಸ್ಮ" ವೆಂತ
ಲೂ ವಿಪತ್ತುಗಳಿಗೆ ಕ್ಷಯಕಾರಕವಾದುದರಿಂದ "ಕ್ಷಾರ" ವೆಂತಲೂ, ಭೂತ, ಪಿಶಾಚಾ
ದಿಗಳಿಂದ ರಕ್ಷಿಸುವುದರಿಂದ "ರಕ್ಷಾ", ಎಂತಲೂ, ಹೀಗೆ ಐದು ವಿಧವಾಗಿ ವಿಂಗಡಿಸಿರು
ವುದನ್ನು ಸಿದ್ಧಾಂತ ಶಿಖಾಮಣಿಯಲ್ಲಿ ನೋಡಬಹುದಾಗಿದೆ, ಇದನ್ನೇ "ದುರುಳಮಾ
ರಿಯ ಹುರುಳುಗೆಡಿಸಿ, ಹಂತಕನಹಲ್ಲುಕಿತ್ತು, ವಿಧಿಲಿಖಿತವತೊಡೆವುದು 'ವಿಭೂತಿ'
ಎಂದು ಶರಣರು ಸಮರ್ಥಿಸಿದ್ದಾರೆ.

ಗೋಮಯಿದಿಂದ, ಮಂತ್ರಸಂಸ್ಕಾರದಿಂದ ಸಿದ್ಧವಾದುದೇ ಶ್ರೇಷ್ಠ ವಿಭೂತಿ.
ಇದರಲ್ಲಿ "ಕಲ್ಪಭಸ್ಮ" ಅನುಕಲ್ಪಭಸ್ಮ, ಉಪಕಲ್ಪಭಸ್ಮ, ಅಕಲ್ಪಭಸ್ಮ ವೆಂಬುದಾಗಿ
ನಾಲ್ಕು ವಿಧದಿಂದ ಕರೆಯುತ್ತಾರೆ. ಶಿವನ ಪಾವಿತ್ರ್ಯ ಸಂಕೇತವಾದ ಚಿದ್ರೂಪಭಸ್ಮವು
ದೇಹಕ್ಕೆ ಸಂಸ್ಕಾರವನ್ನಿತ್ತು ಪರಿಶುದ್ಧಗೊಳಿಸುವುದಲ್ಲದೆ ಆಂತರಂಗಿಕ ವಿಕಾಸಕ್ಕೂ
ಕಾರಣವಾಗಿದೆ: ಮೂರುಬೆರಳುಗಳಿಂದ ಮೂರರುರೇಖೆಗಳು ಮೂಡುವಂತೆ ಧರಿಸುವ
ತ್ರಿಪುಂಡ್ರವೇ ಶ್ರೇಷ್ಠವಾದ ಮಾರ್ಗವೆನಿಸಿದೆ. ವೀರಶೈವತತ್ವದಲ್ಲಿ ವಿಭೂತಿಯ ಸಂಕೇ
ತವೆಂದರೆ "ಮಲತ್ರಯ, ಗುಣತ್ರಯಗಳನ್ನು ಸುಟ್ಟುಬೊಟ್ಟಿಟ್ಟಿರವುದೇ ಆಗಿದೆ. ಹೀಗೆ
ವಿಭೂತಿಯಸ್ಥಾನ ಅನನ್ಯವಾಗಿದೆ.

**ರುದ್ರಾಕ್ಷಿ:** ಪರಶಿವನಜ್ಞಾನಚಕ್ಷುಸ್ಸಿನಿಂದ ಉತ್ಪತ್ತಿಯಾದುದೆಂಬ ಭಾವನೆಇದೆ
ಸರ್ವವೂ ಶಿವಮಯ ಹಾಗು ರುದ್ರಾಕ್ಷಿಯನ್ನು ಧರಿಸಿದವನಿಗೆ ಎಲ್ಲವೂರುದ್ರನೆಂಬ ಭಾವ
ನೆ ಬರುತ್ತದೆಂಬ ತತ್ವವು ರುದ್ರಾಕ್ಷಿಧಾರಣೆಯ ಮಹತ್ವವಾಗಿದೆ. ಅದನ್ನೇ "ರುದ್ರೋ
ಭೂತ್ವಾಯಿಜೇದ್ರುದಃ ನಾ, ರುದ್ರೋರುದ್ರ ಮರ್ಚಿಯೇತ್ ಎಂದು ಹೇಳಿರುತ್ತಾರೆ
ರುದ್ರಾಕ್ಷಿಧಾರಣದಿಂದ ಘೋರಪಾಪಗಳು ನಾಶವಾಗುವುದಲ್ಲದೆ ಕೇವಲ ರುದ್ರಾಕ್ಷಿ
ಸ್ಪರ್ಶವೂ ಪುಣ್ಯಪ್ರದಗಳೆಂಬ ಭಾವನೆಇದೆ. ಅದನ್ನು ಬಸವಣ್ಣನವರು-ಮುಕ್ತಿ ಪಂಥಕ್ಕೆ
ರುದ್ರಾಕ್ಷಿಯೇ ಸಾಧನವಯ್ಯ ಎಂದು ಹೊಗಳಿದ್ದಾರೆ. ಇದಲ್ಲದೆ ವೈಜ್ಞಾನಿಕವಾಗಿಯೂ
ರುದ್ರಾಕ್ಷಿಯು ತಂಬಾಉಪಯೋಗಕಾರಿ. ಇದು ಮನೋವಿಕಾರವನ್ನು ನಾಶಮಾಡುವು
ದಲ್ಲದೆ ರಕ್ತದ ಒತ್ತಡವನ್ನು ಸಮಾನವಾಗಿಡುತ್ತದೆ. ಏಕಮುಖದಿಂದ ಹಿಡಿದು14 ಮು
ಖಗಳ ವರೆಗೂ ಇರುವ ರುದ್ರಾಕ್ಷಿಗಳು ಇರುತ್ತವೆ. ವಿಭೂತಿಯಂತೆಯೇ ರುದ್ರಾಕ್ಷಿಧಾರ
ಣೆಯೂ ಮನುಷ್ಯನ ಅಂತರಂಗ ವಿಕಾಸಕ್ಕೆ ಕಾರಣವಾಗಿದೆ.

**ಮಂತ್ರ** : ಅಷ್ಟಾವರಣದಲ್ಲಿ ಇದೇ ಕೊನೆಯದು. ಎಲ್ಲಿ ಹಂತಗಳಲ್ಲಿಯೂ
ತಿಳಿಯಬರುವ ವ್ಯಾಪಕ ಶಕ್ತಿ ಲಿಂಗ ಜ್ಞಾನವಾಗುವುದು ಗುರುವಿನ ಮೂಲಕವಾ
ದರೂ ಮಂತ್ರ ಪೂರ್ವಕವಾಗಿಯೇ, ವಿಭೂತಿ ರುದ್ರಾಕ್ಷಿಧಾರಣೆಯಲ್ಲಿಯೂ, ಪಾದೋ
ದಕ ಪ್ರಸಾದದ ನಿರ್ವಹಣೆಯಲ್ಲಿಯೂ ಷಟ್‌ಸ್ಥಲ ಸಾಧನೆಯ ಪ್ರಗತಿ ಪಥದಲ್ಲಿಯೂ
ಮಂತ್ರವೇ ತಾರಕ ಶಕ್ತಿಯಾಗಿದೆ. ಈ ರೀತಿ ಮಂತ್ರಪೂರ್ವಕವಾಗಿ ರುದ್ರಾಕ್ಷಿಗ
ಳನ್ನು ಧರಿಸಿದ ಸಾಧಕ ಪರಿಪೂರ್ಣನಾಗುತ್ತಾನೆ ಮಾಂಸ ಪಿಂಡ ಮಂತ್ರಪಿಂಡ
ವಾಗುತ್ತದೆ. ಇದು ಸಾಧಕನ ಅಂತರಂಗದಲ್ಲಿರುವ ದೈವತ್ವವನ್ನು ಅನಾವರಣಮಾಡಿ
ಸ್ವಸ್ವರೂಪದ ಅರಿವನ್ನು ಮಾಡಿಕೊಡುತ್ತದೆ. "ಓಂ ನಮಃ ಶಿವಾಯ" ಇದೇ
ಮಂತ್ರ. ಓಂ ಎಂಬ ಪ್ರಣವದಿಂದ ಇದು ಷಡಕ್ಷರೀ ಮಂತ್ರವೆನಿಸುತ್ತದೆ.

ಬಸವೇಶ್ವರರು ಪಂಚಾಕ್ಷರೀ ಮಂತ್ರದ ಮಹತ್ವವನ್ನು ಕುರಿತು "ಪಂಚಾ
ಕ್ಷರೀ ಮಂತ್ರ ಜಪದಿಂದ ರುದ್ರನಪ್ಪುದು ತಪ್ಪದು. ಶಿವ ಮಂತ್ರವಿಲ್ಲದಾತನು
ಪಕೃತಿಕಾಯನೆನಿಸಿಕೊಂಬನಯ್ಯಾ (ಪ್ರಕೃತಿಕಾಯನೆಂದರೆ ಅಜ್ಞಾನಿ) ಎಂದು
ಹೇಳಿರುತ್ತಾರೆ. ಇಲ್ಲಿ ಓಂಕಾರವು ನಿಷ್ಕಲಂಕ ಶಿವನನು ಬೋಧಿಸುತ್ತದೆ.
ಓರ್ವನು ಶುದ್ಧಜ್ಞಾನ ಸ್ವರೂಪನಾದರೆ ಮತ್ತೊಬ್ಬನು ಪ್ರಪಂಚ ಸ್ವರೂಪ ಶಿವ
ಲಿಂಗ ಸ್ವರೂಪವಾಗಿ ಎನ್ನ ಕರಸ್ಥಲದಲ್ಲಿ ಕಾಣಲ್ಪಟ್ಟಿತ್ತು ನೋಡಾ ಎಂಬ ಶರಣರ
ವಚನವು ಇದನ್ನು ಸ್ಪಷ್ಟ ಪಡಿಸುತ್ತದೆ.

ಸಾಧನೆಯಲ್ಲಿ ಏಕಾಗ್ರತೆಯನ್ನು ಸಾಧಿಸಲು ಮಂತ್ರ ಬಹಳ ಮುಖ್ಯ ಸಾಧನ
ವಾಗಿದೆ. ಕರಿಯಂಜುವುದು ಅಂಕುಶಕ್ಕೆ ಪಂಚ ಮಹಾಪಾತಕವಂಜುವುದು ಕೂಡಲ



ಸಂಗನ ನಾಮಕ್ಕೆ ಎಂಬ ಮಾತು ಮಂತ್ರದ ಮಹತ್ವವನ್ನು ಒತ್ತಿ ಹೇಳುತ್ತಿದೆ.
ಮಂತ್ರ ಜಪವು ಮೂರು ವಿಧವಾಗಿದೆ. ಮನಸ್ಸಿನಲ್ಲಿ ಜಪಿಸುವುದು. "ಮಾನಸಿಕ"
"ಓಂ ನಮಃ ಶಿವಾಯ' ಎಂದು ಹೇಳುವುದು 'ವಾಚಕ' ಕ್ರಿಯಾ ಕಾಲದಲ್ಲಿ ಒಬ್ಬ
ರಿಗೂ ಕೇಳದಂತೆ ಹೇಳುವುದು 'ಉಪಾಸಿಕ" ಮಂತ್ರವು ನೆನೆದವರನ್ನು ಶಿವಸ್ವರೂಪಿ
ಯನ್ನಾಗಿಯೇ ಮಾಡುತ್ತದೆ. ಹೀಗೆ ಅಷ್ಟಾವರಣದಲ್ಲಿ ಮಂತ್ರವು ಪ್ರಾರಂಭ
ದೆಸೆಯಿಂದ ಕೊನೆಯವರೆಗೂ ವಿಶಿಷ್ಟವಾದ ವ್ಯಾಪಕ ಶಕ್ತಿಯನ್ನು ಹೊಂದಿದೆ.

ಈ ರೀತಿಯಾದ ಎಂಟು ಆವರಣಗಳಿಂದ ಸುರಕ್ಷಿತನಾದ ಜೀವನು ಪಂಚಾಚಾ
ರಗಳ ಮೂಲಕ ಷಟ್‌ಸ್ಥಲಗಳನ್ನು ಸರಾಗವಾಗಿ ಏರಲು ಸಮರ್ಥನಾಗುತ್ತಾನೆ. ಆದು
ದರಿಂದಲೇ ವೀರಶೈವತತ್ವದಲ್ಲಿ ಅಷ್ಟಾವರಣಗಳು ಕೇವಲ ಮೂಲಭೂತವಾದ ಸಾಧನೆ
ಯಲ್ಲದೆ ಮೇಲೇರಲೂ ಸಹಾಯ ಮಾಡುತ್ತದೆ.

# ಜಯಸಿಂಹನ ರಾಣಿ ಸುಗ್ಗಲದೇವಿ

—ಸೀತಾರಾಮ ಜಾಗೀರ್‌ದಾರ್
ಮನೆ ನಂ. 9, 3 ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು-570009

ಕರ್ನಾಟಕದಲ್ಲಿ ಅನೇಕ ರಾಣಿಯರು ಬಾಳಿಬದುಕಿದ್ದಾರೆ, ಸಮಾಜದಲ್ಲಿ ತಮ್ಮ ತಮ್ಮ ಸದ್ಗುಣಗಳಿಂದ ಅಮರರಾಗಿದ್ದಾರೆ, ಅಂತಹರಲ್ಲಿ ಚಾಳುಕ್ಯ ಚಕ್ರವರ್ತಿ ಜಯಸಿಂಹನ ಕ್ರಿ. ಶ. ೧೦-೧೪-೧೦೪೨) ರಾಣಿಯೂ ಒಬ್ಬಳು, ಕರ್ನಾಟಕದ ಶಾಸನಗಳು, ಕಾವ್ಯಗಳು ಆಕೆಯನ್ನು ಸುತ್ತಿಸಿವೆ. ಸಮಕಾಲೀನ ದಾಖಲೆ ಶಾಸನ, ಮೊದಲು ಪರಿಗಣಿಸಬೇಕಾದ ವಸ್ತು, ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ದೇವೂರಲ್ಲಿ ಈ ಶಾಸನ ದೊರೆತಿದೆ, ಇದರಕಾಲ ಕ್ರಿ. ಶ. 1029 ಶಾಸನ ಪಾಠವಿಂತಿದೆ:

ಮಹಾರಾಜಾ
1 ....ಭುವನಾ ಸ್ರ [ಯ] ಶ್ರೀ ಪ್ರಥ್ವೀವಲ್ಲಭ ಮಹಾರಾಜಾ
2 ....ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯ
3 ....ಳಕಂ ಚಾಳುಕ್ಯಾಭರಣಂ ಶ್ರೀ ಮಜ್ಜಗದೇಕ ಮಲ್ಲದೇವರ
4 ...[ಯ] ಉತ್ತರೋತ್ತ (ರಂ) ಸಲುತ್ತಮಿರೆ ಸ್ವತ್ತ್ಯನವರತಪ
5 ....ಕಲ್ಯಾಣಾಭ್ಯುದಯ ಸಹಶ್ರಫಳಭೋಗ ಭಾಗಿ
6 ....ದ್ವಿತೀಯ ಲಕ್ಷ್ಮೀ ವಿಶಿಷ್ಟಜನ ಕಾಮದೇನು ಆಶ್ರಿತ
7 ....ಜನಕಲ್ಪಲತೆ ರೂಪವಿದ್ಯಾಧರಿ ಕಲಿಕಾಲ ಸರಸ್ವತಿ
8 ....[ಶ್ರೀ]ಮ [ಜ್ಜ] ಗದೇಕಮಲ್ಲದೇವರ ವಿಶಾಳ ವಕ್ಷಸ್ಥಳ ನಿವಾಸಿನಿ [ಯರ]
9 ಪ್ಪ ಶ್ರೀ ಮತ್ಸುಗ್ಗಲದೇವಿಯರು ಸಕನೃಪಕಾಳಾತೀತ ಸಂವತ್ಸ
10 [ರ]ಸತಂರ್ಗಶೀಣನೆಂಯ [ಶು]ಕ್ಲ ಸಂವತ್ಸರದ ತದ್ವರಿಷಾಭ್ಯಂ
11 [ತರ]ದ ಪುಷ್ಯ ೧ ಬುಧವಾರ ಮುತ್ತರಾಯಣ ಸಂಕ್ರಾ
12 [ಸ್ತಿ]ಯಂನ್ದು ಸ್ವಸ್ತಿಯಮಇಯಾಮಾಸನ ಪ್ರಾಣಾ
13 ಯಾಮ ಪ್ರತ್ಯಾಹಾರ ಧ್ಯಾನಧಾರಣ ಜಪಸಮಾಧಿ
14 ....ಪನ್ನ ಪಾಶುಪತ ಯೋಗಾಚಾರ್ಯ್ಯ ಶ್ರೀಮದ್ಬ್ರಹ್ಮರಾಸಿ
15 ....[ಪಂ] ಡಿತಗ್ಗೆನ್ ದೇವಾಪುರದ ಶ್ರೀ ಮಾರಸಿಂಘೇಸ್ವರ-
16 [ದೇ]ವರಂಗ ಭೋಗಕ್ಕಂ ತಪೋಧನಗ್ಗನ್ಂ ವಿದ್ಯಾರ್ತ್ತಿನ್‌ಗಳುಗ[ಂ]ಮ
17 [ಶ]ನಾಚ್ಛಾದನ ಪಥ್ಯೆ ಪಥಾರ್ತ್ಥ ಮಾಗೆಯೂರ ಪೊಲದ

18 ಪಶ್ಚಿಮ ವಿಸಾಭಾಗದೊಳು ವಿಜಯಾಪುರ
19 ದ ಬಟ್ಟೆಯಿಂ ತೆಂಕ ಹಿಪ್ಪರಗೆಯ ಸೀಮೆಯಿಂ ಮೂಡ
20 ಕಣ್ಣನ್‌ವಳ್ಳಿಯ ಕರಭೂಮಿಗೆ ನಡೆವ ಗಡಿಂಬದ ಪಿರಿಯ
21 ಕೋಲೊಳು ಧಾರಾಪೂರ್ವ್ವಕಂ ಮಾಡಿ ಸರ್ವ್ವನಮಸ್ಯ
22 ಮಾಡಿಬಿಟ್ಟ ಮತ್ತರು ೧೦೦ ದೋಣಿಯಿಂ [ತೆಂ]ಕದೇ
23 ..........ತೋಟ ಮತ್ತು ೨೭
24 ....................................................
25 ...ದೂ [ಕಾನ್ತ]..........
26 ದೀವಿಗೆಗೆ ಪುರದೊಳಗೆ [ನ]ಡೆವ ಗಾಣ್ತ [ಪೊಲ] ಮನೆ
27 ಹಳ್ಳದಿಂ ಮೂಡಣ ತ್ರಿಭೋಗ ಸುಂಕ ತೇಜಸಾಮ್ಯ ದೇವಗ್ಗೆನ್
28 ಸರ್ವ್ವನ್‌ಬಾಧಾ ಪರಿಹಾರವಾಗಿ ಕೊಟ್ಟರು [॥] ಈಸ್ಥಾನ
29 ದೊಳು....ಬ್ರಹ್ಮಾಚಾರ್ಯ್ಯಾದಿ... ...
30 ....ವರ........ ಮಿರ್‍ದ್ದನ್ ಮಾಡಿಸಿಕೊಟ್ಟ ಮ
31 ....ಈ ದೇವ ಭಾಗವಾವ................
32 ನೆಗಳ್ದವರವರದೇ [ಧರ್ಮ]........ (S.I.I. Vol. xx, No. 23)

ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲ ಜಯಸಿಂಹನ ಪತ್ನಿ ಸುಗ್ಗಲದೇವಿ ಸದಾ ಕಲ್ಯಾಣಕಾರಕ ಕೆಲಸವನ್ನು ಮಾಡುತ್ತ ಸಹಸ್ರ ಫಲವನ್ನು ಅನುಭವಿಸುವಪುಣ್ಯ ಪ್ರದೆಯಾಗಿದ್ದಳು, ಎರಡನೆಯ ಲಕ್ಷ್ಮಿಯಂತಿದ್ದಳು, ಆಶ್ರಿತ ಜನಕ್ಕೆ ಕಾಮಧೇನು ಕಲ್ಪವೃಕ್ಷದಂತೆ ಇದ್ದಳು, ರೂಪದಲ್ಲಿ ವಿದ್ಯಾಧರಾಂಗನೆ, ವಿದ್ಯೆಯಲ್ಲಿ ಈಕೆಯ ಈ ಕಲಿಯುಗದ ಸರಸ್ವತಿ ಹೀಗೆ ಕೀರ್ತಿತಳಾದ ಆಕೆ ದೇವಾಪುರದ ಮಾರಸಿಘೇಶ್ವರ ದೇವಸ್ಥಾನದ ಪೂಜೆಪುನಸ್ಕಾರಗಳಿಗೆ, ತಪಸ್ವಿಗಳಿಗೆ, ವಿದ್ಯಾರ್ಥಿಗಳಿಗೆ ಅಶನ, ಆಚ್ಛಾದನ, ಪಥ್ಯಹಾಗೂ ಔಷಧ ಇತ್ಯಾದಿಗಳ ಖರ್ಚಿಗೆಂದು ತ್ರಿಭೋಗ ಸಿದ್ಧಿಗಾಗಿ ಸರ್ವಬಾಧಾ ಪರಿಹಾರ ಮಾಡಿ ಬ್ರಹ್ಮರಾಶಿ ಪಂಡಿತರಿಗೆ ಭೂಮಿಯನ್ನು ದತ್ತಿ ಹಾಕಿಕೊಟ್ಟಳು, ಈ ಬ್ರಹ್ಮರಾಶಿ ಪಂಡಿತರು ಪಾಶುಪತ ಯೋಗಾಚಾರ್ಯ್ಯರಾಗಿದ್ದರು. ಇಲ್ಲಿನ ಈ 'ಪಾಶುಪತ' ಶೈವಬ್ರಾಹಣಪಂಥ, ಸುಗ್ಗಲದೇವಿಯು ಆದರಿಸಿ ಸತ್ಕರಿಸಿದ ಪಂಥ ಎಂಬುದರಲ್ಲಿ ಸಂಶಯವಿಲ್ಲ; ಆಕೆ ಈ ಬ್ರಾಹ್ಮಣಪಂಥಕ್ಕೆ ವಿರೋಧಿ ಆಗಿದ್ದಳೆಂದು ಹೇಳುವುದುಕ್ಕೆ ಸಮಕಾಲೀನ ದಾಖಲೆ ಇಲ್ಲವೆಂಬುದು ಸ್ಪಷ್ಟ. ಅಂತೆಯೆ ಆಕೆ ಶೈವವಿರೊಧಿ ಆಗಿದ್ದಳೆಂದು ಹೇಳಲು ಬರುವುದಿಲ್ಲ. ಇನ್ನು ಆಕೆಯ ಪತಿ ಆ ಜಯಸಿಂಹದೇವನೂ ಈ ಶೈವಪಂಥದ ವಿರೋಧಿ ಆಗಿದ್ದಿಲ್ಲ. ಏಕೆಂದರೆ ಆತನೂ ಅನೇಕ ಶಿವಾಲಯಗಳಿಗೆ ದಾನದತ್ತಿಗಳನ್ನು ಕೊಟ್ಟಿದ್ದಾನೆ, ಅಲ್ಲಿನ ಪಾಶುಪತ ಬ್ರಾಹ್ಮಣ ತಪೋಧನರನ್ನು ಪೂಜಿಸಿದ್ದಾನೆ. ಅದೂಪೊಟ್ಟಳಕೆರೆಯ ನೆಲೆವಿಡಿನಲ್ಲಿಯೆ ಎಂಬುನು ಗಮನಾರ್ಹ S.I.I. Vol. xx, No. 27, ಕ್ರಿ. ಶ. 1041) ಅರ್ಥಾತ್ ಈ ದಂಪತಿಗಳು ಪಾಶುಪತಶೈವ ಬ್ರಾಹ್ಮಣಪಂಥದ ಅನುಯಾಯಿಗಳಾಗಿದ್ದರೆನ್ನುವುದರಲ್ಲಿಸಂದೇಹವಿಲ್ಲ. ಈ ಜಯಸಿಂಹನು ಆಳಿದುದು ಕಿ- ಶ. 1041-1042 ಎಂಬುದು ಈಗ ಖಚಿತ ಸಂಗತಿ ಯಾಗಿರುವುದರಿಂದ ಆತ ಶೈವ ವಿರೋಧಿ ಆಗಿದ್ದನೆಂಬುದು ಶುದ್ಧ ಹುರುಳಿಲ್ಲದ ಅಸತ್ಯದ ಸಂಗತಿ. ವೀರಶೈವ ಸಾಹಿತ್ಯದ ಕೃತಿಗಳು, ಬಸವ ಪುರಾಣ ಮೊದಲು ಮಾಡಿಕೊಂಡು, ಯಾವವೂ ಸಮಕಾಲೀನ ದಾಖಲೆಗಳಲ್ಲ. ಇನ್ನು ಪಾಲ್ಕುರಿಕೆ ಸೋಮನಾಥ ಕವಿಯ ಆ ತೆಲಗು ಕೃತಿಯೂ ಸಹ ದಾಸಿಮಯ್ಯನು ಆ ರಾಜ ದಂಪತಿಗಳನ್ನು ಮತಾಂತರಿಸಿದ ಎಂದು ಹೇಳಿಲ್ಲಃ

ಕ್ಷಿತಿಪತಿಯೈನ ದೇಸಿಂಗಬಲ್ಲಹಾನಿ
ಯತಿವ ಸುಗ್ಗಲ ದೇವಿಯಕಲಂಕಚಿತ್ತ
ತಾನುನು ಬೇಡರ ದಾಸಯ್ಯ ವರದ
ಯಾನೂನ ಸದ್ಭಕ್ತಿ ಮಾನಸಗಾನ ॥

ಬೇಡರ ದಾಸಿಮಯ್ಯನ ವರದಿಂದ ಅಲ್ಲ, ಶ್ರೀಷ್ಮದಯೆಯಿಂದ, ಎಂದರೆ ಆತನ ಕೃಪೆಯಿಂದ ಮಾನಸದಲ್ಲಿ ಬಲಿಯಿತು-ಭಕ್ತಿ. ಆತ ಜೈನರಾಗಿದ್ದ ಅವರನ್ನು ಶೈವ ಅಥವಾ ವೀರಶೈವ ಧರ್ಮದ ತೆಕ್ಕೆಯಲ್ಲಿ ತಂದನೆಂದು ಹೇಳುವುದಕ್ಕೆ ಇಲ್ಲಿ ಆಧಾರವಿಲ್ಲ. ಭೀಮಕವಿಯು (ಕಿ. ಶ. 1369) ಪಾಲ್ಕುರಿಕೆ ಸೋಮನಾಥನನ್ನು ಸರಿಯಾಗಿ ಈ ಭಾಗದಲ್ಲಂತು ಅನುವದಿಸಿಲ್ಲಃ

ಶ್ರಾವಕರನಪಹರಿಸಿ ಸುಗ್ಗಲ
ದೇವಿಯರ ಗುರು ದಾಸಿಮಯ್ಯನು
ಶೈವನಂ ಮಾಡಿದನೊಲಿದು ದೇಸಿಂಗರಾಯನನು ॥

ಇಂತಹ ಹುಚ್ಚಾಟಗಳಿಂದ ವೀರಶೈವಮತವು ದೊಡ್ಡದಾಗುವುದಿಲ್ಲ. ಮೂಲದಲ್ಲಿ ಇಲ್ಲದ ಸಂಗತಿಗಳನ್ನು ಇಲ್ಲಿ ಸಿಡಿದು ತುಂಬಿದ್ದಾನೆ. ಭೀಮಕವಿಯು ಏಕೆ ಈ ಕೆಟ್ಟ ಕೆಲಸ ಮಾಡಿದನೊ ತಿಳಿಯದು. ದೇವರ ದಾಸಿಮಯ್ಯನು ಶಿವೋಪಾಸಕರಾದ ರಾಜದಂಪತಿಗಳಲ್ಲಿ ಶಿವಭಕ್ತಿಯು ಇನ್ನಷ್ಟು ಹೆಚ್ಚಾಗುವಂತೆ ಮಾಡಿರಬಹುದು. ಆದರೆ ಜಯಸಿಂಹನನ್ನು ಜೈನಧರ್ಮದ ಮತಾಂತರ ಗೊಳಿಸಿದನೆನ್ನುವುದು ಸತ್ಯಸಂಗತಿಯಲ್ಲ.

ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣ ಇವ ॥

ವಚನವೊಂದರಲ್ಲಿ ಯಥಾ
( ಭಗವದ್ಗೀತಾ, 7-7) ಗೀತೆಯ ಈ ಶ್ಲೋಕವನ್ನು ತನ್ನ
ವತ್ತಾಗಿ ಅನುವದಿಸಿಕೊಂಡಿರುವನು ದೇವರದಾಸಿಮಯ್ಯ:

ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ,
ಎಣಿಸುವಡೆ ತನುಭಿನ್ನ, ಆತ್ಮನೊಬ್ಬನೆ,
ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು
ಮಣಿವು ತಿರ್ಪೆನಯ್ಯಾ ರಾಮನಾಥ

ದಾಸಿಮಯ್ಯನು ಶೈವ ವಿರೋಧಿಯೂ ಅಲ್ಲ, ಸ್ಥಾವರಲಿಂಗ ವಿರೋಧಿಯೂ ಅಲ್ಲ,
ವಾಸ್ತವದಲ್ಲಿ ಆತನೊಬ್ಬ ಸಮಾಜಸುಧಾರಕ. ಅದರಲ್ಲೂ ಶುದ್ಧ ನಡಾವಳಿಯನ್ನು
ಇಷ್ಟಪಡುವ ವ್ಯಕ್ತಿ. ಆತನ ವಚನಗಳಲ್ಲಿ ಈ ರಾಜದಂಪತಿಗಳನ್ನು ಮತಾಂತರ ಗೊ
ಳಿಸಿದುದುಕ್ಕೆ ಎಲ್ಲಿಯೂ ದಾಖಲೆ ಇಲ್ಲ. ಕಾರಣ ದಾಸಿಮಯ್ಯನ ಕಾಲಕ್ಕೆ ಧಾರ್ಮಿಕ
ವಲಯದಲ್ಲಿ ಈ ಗೊಂದಲ ಇದ್ದಿಲ್ಲವೆಂದು ತೋರುತ್ತದೆ, ಶೈವ, ವೀರಶೈವ ಈ ಬಗೆಯ
ವಿಭಜನೆಯೂ ಇದ್ದಿರಲಿಕ್ಕಿಲ್ಲ. ಈ ಸುಗ್ಗಲದೇವಿಯನ್ನು ಕಾವ್ಯಾವಲೋಕನ ಗ್ರಂಥ
ದಲ್ಲಿಯ ಪದ್ಯವೊಂದು ಹೀಗೆ ವಿವರಿಸಿದೆ (ಪು. ಪದ್ಯ-೧೬೧) :

ತದ ಪತ್ಕಂ ಚಾಗದ ಪೆಂ
ಪೊದವಿರೆ ನೆಗಳ್ದಿಳ್ ಎಗಕ್ಕೆ ವಿನಯಗುಣೈಕಾ
ಸ್ಪದೆ ಸುಗ್ಗಿಯಬ್ಬೆ ತನಗೊಂ
ದಿದ ಚಾಗವೆತಂಗಿಯೆಂಬ ಪೆಸರೆಸೆವಿನೆಗಂ ॥

ಕಾವ್ಯಾಲೋಕನದ ಕರ್ತೃನ್ ನಾಗವರ್ಮ ಈ ಜಯಸಿಂಹನ ಕಟಕಕ್ಕೆ ಆಚಾರ್ಯ
ನಾಗಿದ್ದನು. ಈ ಚಾಗವೆಡಂಗಿ, ಲೋಕಸ್ತುತಿ, ಮುಂದೆ ಹಲವರ ಜೀವನದಲ್ಲಿ
ಮಾದರಿಯಾಗಿ ನಿಂತಳು. ನಾಗವರ್ಮ ಯಾವ ಆಕರದಿಂದ ಈ ಪದ್ಯವನ್ನು ಎತ್ತಿ
ಕೊಂಡಿರುವನೊಸದ್ಯ ತಿಳಿಯದು. ಈ ಸುಗ್ಗಲ ದೇವಿಯ ಅನಂತರ ಅನೇಕ ಸುಗ್ಗ
ಲೆಯರಾಗಿದ್ದಾರೆ ಮುಖ್ಯ ಕೆಲವರನ್ನು ಇಲ್ಲಿ ಸೂಚಿಸಬಹುದು:

1. ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಭುವನೈಕ ಮಲ್ಲನ ತಂಗಿ ಸಿಂದದೊರೆ
ಆಹಮಲ್ಲನ ಸತಿ ಸುಗ್ಗಲೆಯು ಕ್ರಿ. ಶ. 1071 ರಲ್ಲಿ ನಿಡಗುಂದಿ ಅಗ್ರಹಾರವನ್ನು
ಆಳುತ್ತಿದ್ದಳು (In & P. K Kolhpur state No. 5)

2. ಭುವನೈಕ ಮಲ್ಲನ ನಮ್ಮ ಕಲ್ಯಾಣದ ಚಾಲುಕ್ಯ ಚಕ್ರವರ್ತಿ ತ್ರಿಭುವನ
ಮಲ್ಲ ವಿಕ್ರಮಾದಿತ್ಯನ ರಾಣಿ ಸುಗ್ಗಲದೇವಿ ಕ್ರಿ. ಶ. 1123 ರಲ್ಲಿ ರೇವಣೇಶ್ವರ ದೇವಿ
ಸ್ಥಾನಕ್ಕೂ ಬ್ರಹ್ಮಪುರಿಗೂ ಭೂಮಿಯನ್ನು ದಾನ ನೀಡಿದಳು (ತಾಂದೇಡ ಜಿಲ್ಲೆಯ
ಶಾಸನಗಳು. 23 )

3. ತೊರಗಲ್ಲ ಶಾಸನದಲ್ಲಿ ಕ್ರಿ. ಶ. 1187 ರಲ್ಲಿ ಮಾಂಡಲಿಕ ಬರ್ಮ ಭೂಪಾ
ಲನ ಸತಿ ಸುಗ್ಗಲೆಯು ತನ್ನ ಪಾತಿವ್ರತ್ಯವನ್ನು ಸಿದ್ಧಪಡಿಸುವುದಕ್ಕಾಗಿ ಘಟಸರ್ಪ



ಪವಾಡವನ್ನುಮಾಡಿ ಮೆರೆದಳು.

4. ಕ್ರಿ. ಶ. 1198 ರಲ್ಲಿ ಹುಟ್ಟಿದ ತರಿಕೆರೆ ತಾಲೂಕಿನ ಅಮೃತಾಪುರದಲ್ಲಿರುವ,
ಕವಿಚಕ್ರವರ್ತಿ ಜನ್ನನು ಬರೆದಿರುವ, ಶಾಸನದಲ್ಲಿ ಅಮೃತೇಶ್ವರ ದಂಡನಾಯಕನ
ತಾಯಿ ಸುಗ್ಗಿಯಕ್ಕನು ತನ್ನ ಒಳ್ಳುಣಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದಳು:

ಹರಿಯಮ ಸೆಟ್ಟಿಯ ಕುಳವಧು । ಚರಿತ್ರವತಿ ಕಳಾವತಿ ಲೋಕೋ
ತ್ತರ ಮಾವವತಿ ಸರಸ್ವತಿ । ಸರಿ ಸರಿಯೆಂಬನ್ತು ಸುಗ್ಗಿಯಕ್ಕಂ ನೆಗವ್ದಿಳು॥
ರಸರ್ಮಿರ್ಪುದು ಕರತಳದೊಳು ।ರಸಾಯನಂ ನುಡಿಯೊಳಿರ್ಪ್ಪುದೀಕ್ಷಣದೊಳ್ ಸೊಂ
ಪೆಸೆವಮೃತ ಮಿರ್ಪ್ಪುದೆನೆ ಸಂ। ತೊಸದಿಂ ಸುಗ್ಗವ್ವೆ ತಣಿವುವಳ್ಪರಿ ಜನಮಂ॥

(ಎಪಿ. ಕರ್ನಾಟಕ ಸಂ, ೫ ( ಬಿ, ಎಲ್. ಕೈ,) ತಕೆ. 45]

5. ವೀರಬಲ್ಲಾಳನ ಇನ್ನೊಬ್ಬ ದಂಡನಾಯಕ ಕುವರಲಕ್ಷ್ಮನ ಮಡದಿಯ
ಸುಗ್ಗಲೆ ಎಂಬ ಹೆಸರನ್ನೆ ಹೊಂದಿದ್ದು ಜಯಸಿಂಹ ಚಕ್ರವರ್ತಿಯ ಸತಿಯ ಹಾಗೆ
ಯೆ ಇದ್ದಳೆಂದು ಬರೆದಿದೆ.

ಜಯಸಿಂಹ ಕ್ಷಿತಿಪಾಳಕಂಗೆ ಜಗವೆಲ್ಲಂ ಬಣ್ಣಿದಲ್ ಪೂಣ್ದು ಭಾ
ಪೆಯನಾ ಸುಗ್ಗಲದೇವಿ ಕೊಟ್ಟತೆಱದಿಂ ಬಲ್ಲಾಳಭೂಪೋತ್ತಮ
ಪ್ರಿಯ ಪುತ್ರಂಗೆ ಕುಮಾರ ಲಕ್ಷ್ಮರಥಿನೀ ನಾಥಂಗೆ ಕೊಟ್ಟಳ್ ಮನಃ
ಪ್ರಿಯೆಯಿಂ ಸುಗ್ಗಲದೇವಿ ಭಾಪೆಯನಿಳಾಚಕ್ರಂ ಪೊಗಳ್ವನ್ನೆಗಂ ॥

(ಎಪಿ. ಕರ್ನಾಟಕ ಸಂ [ಬಿ.ಎಲ್. ಕೈ] ಬೇಲೂರು–112]

6. ಕರ್ಮಯೋಗಿ ಸಿದ್ಧರಾಮನ ತಾಯಿ ಸುಗ್ಗಲದೇವಿಯು ವೀರಶೈವ
ಧಾರ್ಮಿಕ ಕೃತಿಗಳಲ್ಲಿ ತನ್ನದೇ ಆದ ವಿಶಿಷ್ಟಸ್ಥಾನವನ್ನು ಪಡೆದಿದ್ದಾಳೆ. ಈಕೆ ಒಬ್ಬಳನ್ನು
ಬಿಟ್ಟರೆ ಮಿಕ್ಕವರೆಲ್ಲರೂ ಶೈವರೆ ಹೊರತು ವೀರಶೈವರಲ್ಲ. ಇನ್ನು ಸಿದ್ದರಾಮನೂ
ಲಿಂಗ ದೀಕ್ಷೆಯನ್ನು ಸಾಕಷ್ಟು ವಯಸ್ಕನಾದ ಮೇಲೆ ಪಡೆದನೇಂಬುದನ್ನು ಜ್ಞಾಪಕಕ್ಕೆ
ತಂದುಕೊಂಡರೆ ಆತನ ತಾಯಿಯು ವೀರಶೈವಳಾಗಿದ್ದಳೆನ್ನುವುದಕ್ಕೆ ಆಧಾರಗಳಿಲ್ಲ.

ಈ ಪರಿವೀಕ್ಷಣೆಯಲ್ಲಿ ಹೊರಬೀಳುವ ಫಲಿತಾಂಶವಿಷ್ಟೆ ಈ ಸುಗ್ಗಲದೇವಿಯರೆಲ್ಲ
ಸ್ಥಾವರಲಿಂಗ ಭಕ್ತರು; ಪಾಶುಪತ ಶೈವ ಮಾರ್ಗಿಗಳು. ಪಾಶುಪತ ಮತಾನುಯಾಯಿ
ಗಳು ಅನಂತರದಲ್ಲಿ ವೀರಶೈವ ಪಂಥದಲ್ಲಿ ವಿಲೀನಗೊಂಡಿರುವುದು ಸ್ಪಷ್ಟವಿದ್ದರೂ
ಆರಂಭದಿಂದಲೂ ಅವರನ್ನು ವೀರಶೈವ ಪಂಥದ ವ್ಯಕ್ತಿಗಳೆಂದು ಹೇಳಲು ಬರುವುದಿಲ್ಲ.
ಈ ಪಂಥದ ಕೆಲವು ಕುಟುಂಬಗಳು ಈಗಲೂ ಇವೆ. ಅವರು ಸ್ಮಾರ್ತ ಪಂಗಡ
ದಲ್ಲಿರುರುವುದರಿಂದ ಅವರನ್ನು ಸ್ಮಾರ್ತರೆಂದು ಹೇಳಲಾಗುತ್ತದೆ. ಅಂತೆಯೆ ರಾಣಿ
ಸುಗ್ಗಲಾದೇವಿಯನ್ನು ಹಾಗೂ ಆಕೆಯ ಭರ್ತೃ ಜಯಸಿಂಹನನ್ನೂ ಜೈನರಾಗಿದ್ದ
ರೆಂದು ಬರೆಯುವುದು ಅಸಂಗತ. ಇನ್ನುಮುಂದೆ ನಮ್ಮ ವಿದ್ವಾಂಸರು ವೀರಶೈವ
ಸಾಹಿತ್ಯ ಚರಿತ್ರೆಯನ್ನು ಬರೆಯುವಲ್ಲಿ ಇಂತಹ ನಿರಾಧಾರ ಸಂಗತಿಗಳನ್ನು ಕೈ
ಬಿಡುವರೆಂದು ಆಶಿಸುವೆ. ●

# ಉತ್ತರ ಕರ್ನಾಟಕದ ಜಾತ್ರೆಗಳು.


- ಡಾ|| ಮಲ್ಲಿಕಾರ್ಜುನ ಲಕ್ಷೆ. ಎಂ.ಎ , ಪಿ.ಹೆಚ್.ಡಿ,
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-585106


'ಯಾನೇನ ತ್ರಾಯತ ಇತಿ ಯಾತ್ರಾ, ಆದರೆ ಪುಣ್ಯಕ್ಷೇತ್ರದರ್ಶನಕ್ಕೆ ಹೋಗು
ವವರ ಶ್ರೀರಕ್ಷೆಯೇ ಯಾತ್ರೆಯಾಗಿದೆ. ಈ ಯಾತ್ರಾ, ಶಬ್ದದ ತದ್ಭವ ರೂಪಜಾತ್ರೆ,
ಯಾಗಿದೆ. ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವದೇವತೆ
ಗಳನ್ನು ಗ್ರಾಮೀಣರು ಹಾಗೂ ಶಿಷ್ಯರು, ಭಯಭಕ್ತಿಯಿಂದ ಸಾಮೂಹಿಕವಾಗಿ
ಪೂಜಿಸಿ, ಪ್ರಾರ್ಥಿಸುವ ಸಂಭ್ರಮದ ಜನಸಮೂಹವನ್ನು 'ಜಾತ್ರೆ, ಎಂದು ಕರೆಯ
ಲಾಗುತ್ತಿದೆ. ನಿಸರ್ಗದ ಮಡಿಲ್ಲಲ್ಲಿ ಚಳಿ ಮಳೆ, ಬಿಸಿಲು-ಗಾಳಿ ಎನ್ನದೆ ಹೊಟ್ಟೆ
ಹೊರೆದುಕೊಳ್ಳಲು ನಿರಂತರ ಶ್ರಮಿಸುತ್ತಿರುವ ಜನತೆ ಕಲ್ಲು, ಮಣ್ಣು, ಮರಗಳಲ್ಲಿ
ದೈವತ್ವದ ಅಂಶವನ್ನು ಕಂಡುಕೊಂಡು ಶ್ರದ್ಧೆಯಿಂದ ಹಲವಾರು ಆಚರಣೆಗಳನ್ನು
ರೂಢಿಯಲ್ಲಿ ತಂದಿದ್ದಾರೆ. ಇಂಥವುಗಳಲ್ಲಿ ಜಾತ್ರೆಯೂ ಒಂದು, ಸಮಾಜದೊಂದಿಗೆ
ಒಂದಾಗಿ ಬದುಕು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಘಿಕ
ಜೀವನಗಳೆರಡೂ ಹಿತರಕ್ಷಣೆಗಾಗಿ, ಮೂಕಪ್ರಾಣಿಗಳ ಸುಖಕ್ಕಾಗಿ, ರೋಗರುಜಿನಗಳು
ಬಾರದಂತೆ, ಮಳೆ-ಬೆಳೆ ಸರಿಯಾಗಿ ಬರುವಂತೆ ಪ್ರಾರ್ಥಿಸುವುದು ಈ ಜಾತ್ರೆಗಳನ್ನು
ಆಚರಿಸುವ ಉದ್ದೇಶವಾಗಿದೆ. ಅದಕ್ಕೆಂದು ಮುಗಡವೆ ಹರಕೆ ಹೊರುವ ಸಂಪ್ರ
ದಾಯವೂ ಬೆಳೆದುಬಂದಿದೆ.

ಜಾತ್ರೆಗಳು ಎಲ್ಲ ದೇಶಗಳಲ್ಲಿ ರೂಢಿಯಲ್ಲಿದ್ದು ಪ್ರತಿಯೊಂದು ಜನಾಂಗದಲ್ಲಿಯೂ
ನಡೆದುಕೊಂಡು ಬಂದಿರುತ್ತವೆ. ಉತ್ತರ ಕರ್ನಾಟಕದ ಜಾತ್ರೆಗಳು ಪ್ರಾದೇಶಿಕ
ವೈಶಿಷ್ಟದಿಂದ ಕೂಡಿರುತ್ತವೆ. ಕಾರವಾರ' ಜಿಲ್ಲೆಯೊಂದನ್ನುಳಿದು ಬೆಳಗಾವಿ, ಧಾರ-
ವಾಡ, ವಿಜಾಪುರ, ಬಳ್ಳಾರಿ, ರಾಯಚೂರ' ಬೀದರ, ಗುಲಬರ್ಗ- ಈ ಜಿಲ್ಲೆಗಳಿಂದ
ಆವೃತವಾದ ಉತ್ತರ ಕರ್ನಾಟಕದ ಜನರ ಊಟ-ಉಡಿಗೆ, ಆಚಾರ-ವಿಚಾರ,
ಉದ್ಯೋಗ-ವ್ಯವಸಾಯ ಮೊದಲಾದ ಜೀವನಶ್ರಮ ಹೆಚ್ಚು ಕಡಿಮೆ ಒಂದೇ ಬಗೆಯಾ
ಗಿದೆ. ಉಳಿದೆಡೆಗಳಂತೆ-ಇಲ್ಲಿ ಗ್ರಾಮೀಣ ದೇವತೆಗಳ ಹಾಗು ಇಷ್ಟದೇವತೆಗಳ ಪೂಜೆ
ಪ್ರಾರ್ಥನೆಯೊಂದಿಗೆ ಜಾತ್ರೆಗಳು ವೈಭವದಿಂದ ನಡೆಯುತ್ತ ಬಂದಿವೆ. ಈ ಜಾತ್ರೆ
ಗಳಲ್ಲಿ ಗುಡಿ-ಜಾತ್ರೆ. ಮಠದ ಜಾತ್ರೆ ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಿ
ಕೊಳ್ಳ-ಬಹುದಾಗಿದೆ. ಗುಡಿ ಸಂಸ್ಕೃತಿ ಸ್ಥಾವರ, ಮಠದ ಸಂಸ್ಕೃತಿ-ಜಂಗಮ

ಮೊದಲನೆಯದು ಜಡಭರಿತವಾದುದು, ಇನ್ನೊಂದು ಚೈತನ್ಯ ಪೂರ್ಣವಾದುದು. ಜಾನ
ಪದ ಜಗತ್ತಿಗೆ-ಇವೆರಡೂ ಒಂದೇ ಹೀಗಾಗಿ ಮಠದ ಸಂಸ್ಕೃತಿಗಂಟಿಕೊಳ್ಳಬೇಕಾದ
ಚೈತನ್ಯ ಶಕ್ತಿ-ಅದೂ--ಗುಡಿಸಂಸ್ಕೃತಿಯ ಕಡೆಗೇ ವಾಲುತ್ತಿದೆ. ಯಾವುದೇ ಜಾತ್ರೆ
ಯಿರಲಿ ಅದು ಸಂಪ್ರದಾಯದ ಚೌಕಟ್ಟಿಗಂಟಿಕೊಂಡೇ ನಡೆಯಬೇಕಾಗುತ್ತದೆ.

**ಗುಡಿ ಜಾತ್ರೆಗಳು :**

ತಾವು ನಂಬಿಕೊಂಡು ಬಂದಿದ್ದ ದೇವ–ದೇವತೆಗಳ ಹೆಸರಿನಲ್ಲಿ ಕಲ್ಲು ಕಟ್ಟಿಗೆ
ಪೂಜೆ ಮಾಡಿಯೊ ಮೇಲೆ ಗುಡಿ-ಗುಂಡಾರಗಳನ್ನು ಕಟ್ಟಿಸಿಯೋ ವರುಷಕ್ಕೊಮ್ಮೆ
ಇಲ್ಲವೆ ತಮಗೆ ಅನುಕೂಲವಾದಾಗ ಜಾತ್ರೆ ನೆರವೇರಿಸುವರು.
ಸುಗ್ಗಿ - ಹೊರತುಪಡಿಸಿ ಉಳಿದ ಅವಧಿಯಲ್ಲಿ ಗುಡಿಜಾತ್ರೆಗಳನ್ನು ನೆರವೇರಿಸುವರು. ಮಳೆಗಾಲ ಮತ್ತು
ದೇವ - ದೇವತೆಗಳನ್ನು ಪಲ್ಲಕಿ ಇಲ್ಲವೆ ತೇರಿನಲ್ಲಿ ಕೂಡಿಸಿ ಜಾತ್ರೆ ಮಾಡುವರು.
ಪ್ರಭಾವವೀದೇವರ ಜಾತ್ರೆಗಳು ತೇರಿನ ಜಾತ್ರೆಗಳಾಗಿರುತ್ತವೆ. ಬದಾಮಿ ಬನಶಂಕರಿ
ಜಾತ್ರೆ ತೇರಿನ ಜಾತ್ರೆಯಾಗಿದ್ದು ಅದು ಬಹು ಆಕರ್ಷಕವಾಗಿರುತ್ತದೆ. ಉತ್ತರ
ಕರ್ನಾಟಕದಲ್ಲಿ ಹೆಣ್ಣು ದೇವರ ಜಾತ್ರೆಗಳೇ ಹೆಚ್ಚು ಅವುಗಳ ಕಾಟ ಜನತೆಗೆ ಹೆಚ್ಚಾಗಿ
ರುವುದೆಂಬ ನಂಬಿಗೆಯಿರುವುದರಿಂದ ಅದರ ನಿವಾರಣೆಗೆಂದು ಅವುಗಳಜಾತ್ರೆ
ನೆರವೇರಿಸುತ್ತ ಬಂದದ್ದುಂಟು. ಇಂಥವುಗಳಲ್ಲಿ ಗೊಳ್ಯಾದ ಲಕ್ಕಮ್ಮ, ಫತ್ತರಗಿ
ಭಾಗಮ್ಮ, ಖನಗಾವಿ ಕನ್ನವ್ವ' ಗುಂಜಿ ಮಾಹುಲಿದೇವಿ, ತಕ್ಕೇರಿ ಭಿಷ್ಯವ್ವ, ಚಿಂಚಲಿ
ಮಾಯವ್ವ, ಗೋಲಗೇರಿ ದುರ್ಗಮ್ಮ, ಪಡಗಾನೂರ ಮಾರಿಲಕ್ಕಮ್ಮ, ಆರೋಲಿ ಹು
ಲಿಗೆಮ್ಮ, ಸೊಂತ ಚೆಂದಮ್ಮ, ಚಿಂಚೋಳಿ ಭಾಗಮ್ಮ, ಬಗದೂರಿ ಎಲ್ಲಮ್ಮ- ಅಲ್ಲದೆ
ಪ್ರತಿಯೊಂದು ಗ್ರಾಮದಲ್ಲೂ ಗ್ರಾಮ ದೇವತೆಯಾಗಿ ಕಂಗೊಳಿಸುವ ದಾಮವ್ವ, ಮತ್ತು
ಉಳಿದ ಶಿರವ್ವ, ಮಾರಿತಾ, ದುರ್ಗವ್ವ ಅಲ್ಲದೆ ಎಲ್ಲಮ್ಮ ಮೊದಲಾದ ಹೆಣ್ಣು ದೇವರ
ಜಾತಿಗಳು ಒಂದಿಲ್ಲೊಂದು ಹೆಸರಿನಲ್ಲಿ ಈಗಲೂ ನಡೆಯುತ್ತ ಬಂದಿರುತ್ತವೆ. ಸವ
ದತ್ತಿ, ಕೊಶಟಸೂರ, ನೀರಮಾನ್ವಿ, ಕಲಮಾಲಿ, ಚಿಂಚನಸೂರ ಮೊದಲಾದ ಸ್ಥಳಗ
ಳಲ್ಲಿರುವ ಎಲ್ಲಮನ ಜಾತ್ರೆಗಳಂತೂ ಪ್ರಸಿದ್ಧಿ ಪಡೆದ ಜಾತ್ರೆಗಳಾಗಿವೆ.

ಜಾತ್ರೆಗಳ ಸಮಯದಲ್ಲಿ ವರುಷಕ್ಕೊಮ್ಮೆ ದೇವರ ಗುಡಿಯನ್ನು ಸ್ವಚ್ಛಗೊಳಿಸಿ
ಸುಣ್ಣ-ಬಣ್ಣದಿಂದ ಅಲಂಕರಿಸಿ, ದೇವರಿಗೆ ಹೊಸಬಟ್ಟೆ ಉಡಿಸಿ ಆಭರಣ ಇಡಿಸಿ, ತರ
ತರದ ನೈವೇದ್ಯ ಅರ್ಪಿಸಿ ಸಂತೋಷಪಡುತ್ತಾರೆ. ವೈಯಕ್ತಿಕವಾಗಿ ಮತ್ತು ಸಾಮೂ
ಹಿಕವಾಗಿಯೂ ಹರಕೆಗಳನ್ನು ತೀರಿಸುವ ಸಂಪ್ರದಾಯವಿದೆ. ಖಾಂಡ, ಪ್ರಸ್ತದಂ
ತಹ ಅನ್ನ-ಅರವಟಿಗೆ ಗಳನ್ನಿಟ್ಟು ಪುಣ್ಯಕಾರ್ಯ ನಡೆಸುವರು. ಅಂಧಶ್ರದ್ಧೆಯಿಂದ





ಏನಿಲ್ಲ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ದೇವರ ಪ್ರೀತ್ಯರ್ಥವೆಂದು ಮೂಕಪ್ರಾಣಿ
ಗಳನ್ನು ಬಲಿಕೊಡುವ ದುಷ್ಟ ಸಂಪ್ರಾದಾಯ ಈಗಲೂ ಉಳಿದುಕೊಂಡು ಬಂದಿದ್ದು
ದುರ್ದೈವದ ಸಂಗತಿ. ಕೋಳಿ, ಕುರಿ, ಕೋಣಗಳು ಇಂಥ ಹಿಂಸೆಗೆ ಬಲಿಬೀಳುತ್ತಲಿವೆ.
ತಕ್ಕೇರಿ ಭಿಷ್ಟವ್ವ, ಚಿಂಚಿಲಿ ಮಾಯವ್ವ, ಗೊಳ್ಯಾದ ಲಕ್ಕವ್ವ, ಗೋಕಾಕದ
ದ್ಯಾಮವ್ವ, ಗುಂಜಿಮಾಹುಲಿದೇವಿಯ ಜಾತ್ರೆಗಳಲ್ಲಿ ಇಂಥ ಅನಾಹುತಗಳು ನಡೆಯು
ತ್ತಿವೆ. ಎಲ್ಲಮ್ಮನ ಜಾತ್ರೆಯಲ್ಲಿ ದೇವದಾಸಿಯರನ್ನು ಬಿಡುವ, ಬೆತ್ತಲೆಸೇವೆ ನಡೆಸುವ
ಅನಿಷ್ಟಸಂಪ್ರದಾಯಗಳು ಈಗಲೂ ಅಲ್ಲಲ್ಲಿ ನಡೆಯುತ್ತಲೇ ಇವೆ. ಹೆಣ್ಣು ದೇವರ
ಜಾತ್ರೆಗಳಂತೆ ಗಂಡು ದೇವರ ಜಾತ್ರೆಗಳೂ ಪ್ರಸಿದ್ಧಿ ಪಡೆದಿರುತ್ತವೆ. ಪೌರಾಪಿಕ
ವ್ಯಕ್ತಿಗಳಾಗಿ ಕಂಗೊಳಿಸಿದ ವೀರಭದ್ರ ದೇವರ ಜಾತ್ರೆಗಳಿಗಂತೂ ಲೆಕ್ಕವಿಲ್ಲ.
ಹುಮನಾಬಾದ, ಕಾರಡಗಿ, ಶಹಪೂರ, ಗೊಡಚಿ, ಯಡೂರ, ಹಲಕಟ್ಟಿ, ನಗನೂರ,
ಚಿಣಾಮಗೇರಿ, ಹಟ್ಟಿಹೊಳಿ, ಹೆಬ್ಬಾಳ್–ಮೊದಲಾದ ಗ್ರಾಮಗಳಲ್ಲಿ ವೀರಭದ್ರದೇವರ
ಜಾತ್ರೆ ಭರದಿಂದ ನಡೆಯುತ್ತ ಬಂದಿದ್ದು ಅವು ಇಂದಿಗೂ ಜಾಗ್ರತ ಸ್ಥಾನಗಳಾಗಿ
ಹೆಸರುವಾಸಿಯಾಗಿವೆ. ವೀರಭದ್ರದೇವರ ಜಾತ್ರೆಯಲ್ಲಿ ಅಗ್ಗಿತುಳಿತ, ಪುರವಂತರ
ಕುಣಿತ, ಶಸ್ತ್ರಹಾಕುವುದು, ಒಡಬ ಹೇಳುವುದು, ತೇರುಜಗ್ಗುವುದು–ಮೊದಲಾದ ಕಾರ್ಯ
ಕ್ರಮಗಳು ನಡೆಯುತ್ತ ಬಂದಿವೆ. ಕಲ್ಲೋಳ್ಳಿ, ಮಲಗೂರ, ಕೋಟಿಕಲ್ಲ, ಕೆಂಚೂರ
ಮುದನಾಳ ಮೊದಲಾದ ಊರುಗಳಲ್ಲಿ ಹನುಮಂತ ದೇವರ ಜಾತ್ರೆಗು ನಡೆಯುತ್ತವೆ.
ಈ ಜಾತ್ರೆಗಳಲ್ಲಿ ಕೆಲಕಡೆಗೆ ತೇರು ಜಗ್ಗಿದರೆ ಇನ್ನು ಕೆಲಕಡೆಗೆ ಓಕಳಿ ಆಡುವರು.
ಹೀಗೆ ಉತ್ತರ ಕರ್ನಾಟಕದ ಜನಪದರು ನಂಬಿಕೊಂಡು ಬಂದಿದ್ದ ಕರೆವ್ವ, ಕಾಳವ್ವ,
ಮಾರವ್ವ, ದ್ಯಾಮವ್ವ, ದುರ್ಗವ್ವ-ಮೊದಲಾದ ದೇವತೆಗಳನ್ನು ಪೂಜಿಸುವುದರೊಂದಿಗೆ
ಪೌರಾಣಿಕ ದೇವರುಗಳಾದ ವೀರಭದ್ರ, ಹನುಮಂತ–ಮೊದಲಾದ ದೇವರನ್ನು
ಅಷ್ಟೇ ಶ್ರದ್ಧೆಯಿಂದ ಪೂಜಿಸುತ್ತ ಬಂದಿದ್ದಾರೆ. ಇವು ಪ್ರಾಚೀನ ಕಾಲದಿಂದ ನಡೆ
ಯುತ್ತ ಬಂದ ಜಾತ್ರೆಗಳು.

**ಮಠದ ಜಾತ್ರೆಗಳು :-** ಆ-ಆ ಮತಧರ್ಮಕ್ಕೆ ಸಂಬಂಧಿಸಿದ ಸಂತರ, ಮಹಾತ್ಮರ,
ಶಿವಯೋಗಿಗಳ–ಸ್ಮರಣಾರ್ಥವಾಗಿ-ನಡೆಯುತ್ತ ಬಂದಿರುವ ಜಾತ್ರೆಗಳು ಮಠದ ಜಾತ್ರೆ
ಗಳೆನಿಸಿವೆ. ಜನತೆಗೆ ಒಳ್ಳೆಯದರ ತಿಳುವಳಿಕೆ ಮೂಡಿಸಿ, ಅಂಧ ಶ್ರದ್ಧೆಯನ್ನು
ಹೊಡೆದು ಹಾಕಿ ಸುಜ್ಞಾನಿಗಳನ್ನಾಗಿ ಮಾಡಿದ ಮಹಾತ್ಮರ ಮರಣಾನಂತರ ಅವರ
ಪುಣ್ಯತಿಥಿಯಂದು ಜಾತ್ರೆಗಳನ್ನು ಆಚರಿಸುತ್ತ ಬಂದಿದ್ದಾರೆ. ಅರಿವಿನ ಆಗರಕ್ಕೆಂದು
ಮಠಗಳ ಸ್ಥಾಪನೆಯಾಗಿದ್ದರೂ ಅವು ಬರಬರುತ್ತ ಸಂಪ್ರದಾಯಕ್ಕೆ ಜೋತುಬಿದ್ದು
ಮೂಲಗುರಿ ತಲುಪದೆ, ಜನ ಒಲವಿನಂತೆಯೇ ನಡೆದುಕೊಳ್ಳುವ ಶೋಷಣೆಯ
ಕೇಂದ್ರಗಳಾಗಿ ಮಾರ್ಪಾಟಾಗಿದೆ. ಆದರೂ ಕೆಲವೊಂದು ಮಠಗಳು ತಮ್ಮ ತಮ್ಮ
ಸ್ಥಾನಮಾನಕ್ಕೆ ಸರಿಯಾಗಿ ವೈಚಾರಿಕ ಹಿನ್ನೆಲೆಯಲ್ಲಿ ಜನತೆಗೆ ಒಳ್ಳೆಯ ತಿಳಿವಳಿಕೆ

ಉಂಟು ಮಾಡಿಸುತ್ತ ಬಂದಿರುತ್ತವೆ. ಅನ್ನದಾಸೋಹದ ಜೊತೆಗೆ ಜ್ಞಾನ ದಾಸೋಹ
ದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ,
ಕ್ಷೇತ್ರಗಳಲ್ಲಿ ಜನಜಾಗೃತಿ ಮಾಡುತ್ತ ಬಂದಿರುತ್ತವೆ. ಹಿಂದೂ, ಮುಸಲ್ಮಾನ,
ಶೀಖ, ಕ್ರೈಸ್ತ, ಯಾವುದೇ ಮತಪಂಥದವರಿರಲಿ, ತಮ್ಮ ತಮ್ಮ ಮತ ಧರ್ಮದ,
ಮಹಾತ್ಮರ–ಸಂತರ ಶಿವಯೋಗಿಗಳ ಶರಣರ ಪುಣ್ಯತಿಥಿ ಆಚರಿಸುತ್ತ ಬಂದಿದ್ದಾರೆ.
ಇವು ಶಿಷ್ಯ ಸಂಪ್ರದಾಯಕ್ಕಂಟಿಕೊಂಡು ಬಂದಿದ್ದರೂ–ಶ್ರೀ ಸಾಮಾನ್ಯರೇ ಅಧಿಕ
ಜನಸ್ತೋಮದಿಂದಾಗಿ ಇವು ಜನಪದ ಜಾತ್ರೆಗಳಾಗಿ ಕಂಗೊಳಿಸುತ್ತವೆ ಮಠದ
ಉಚ್ಛ ಸಂಸ್ಕೃತಿಯ ಪಡಿಯಚ್ಚಿನಲ್ಲಿ ನಡೆದುಬರುತ್ತಿರುತ್ತವೆ.

ಉತ್ತರ ಕರ್ನಾಟಕದಲ್ಲಿ ಹಲವಾರು ಮತಸಂತರ ಜನರೂ ವಾಸವಾಗಿದ್ದಾರೆ
ಆ-ಆ ಸಂತರ ಮಂದಿರಗಳಿಗೆ, ಮಠಗಳಿಗೆ ಇಲ್ಲಿ ಸಾರ್ವಜನಿಕ ಮನ್ನಣೆ, ಎಲ್ಲರ
ಸೊತ್ತು ಎನ್ನುವ ಅಭಿಮಾನ, ಅವುಗಳ ರಕ್ಷಣೆ-ಪ್ರಗತಿಗಾಗಿ ಸಮಾಜದವರೆಲ್ಲರ ಕರ್ತವ್ಯ.
ಆ-ಆಸಮಾಜದ ಜನರಿಂದ ಮಠ-ಮಂದಿರಗಳು ಸೂಚಿಸಲ್ಪಡುತ್ತಿದ್ದರೂ ನಡೆದುಕೊಳ್ಳುವ
ಜನರು ಮಾತ್ರ ಎಲ್ಲ ಜಾತಿ-ಜನಾಂಗದವರು. ಉತ್ತರಕರ್ನಾಟಕದ ಹಳ್ಳಿಗಳ ಜನವಸತಿ
ಹೆಚ್ಚಾಗಿ ವೀರಶೈವರದು. ಇದರಿಂದಾಗಿ ಗುರು- ವಿರಕ್ತಮಠಗಳು ಊರಿಗೊಂ
ದರಂತೆ-ಸಹಸ್ರ ಸ್ಥಾಪಿಸಲ್ಪಟ್ಟವೆ. ಅದೇರೀತಿ- ವೈಷ್ಣವರ. ಜೈನರ, ಮುಸಲ್ಮಾನರ
ಸಿಖ್ಖರ, ಕ್ರೈಸ್ತರ ಮಠಗಳೂ ಅಲ್ಲಲ್ಲಿ ಸ್ಥಾಪನೆ ಗೊಂಡಿವೆ. ಬೀದರಿನಲ್ಲಿ ನಾಗಕ
ಝರಿ-ಸೀಖರ ಪವಿತ್ರ ಯಾತ್ರಾಸ್ಥಳವಾಗಿದೆ. ವೈಷ್ಣವರು ಸಂತರ ಜಾತ್ರೆಗಳನ್ನು
‹ಉತ್ಸವ ಇಲ್ಲವೆ ‹ಆರಾಧನ, ಎಂದೂ, ಮುಸಲ್ಮಾನರ ಜಾತ್ರೆಗಳನ್ನು ‹ಉರುಸ್
ಎಂದೂ ಕರೆಯುವರು. ಹಲಸಂಗಿ ದಾದೇಪೀರ್, ಬಸವಕಲ್ಯಾಣ ರಾಜಾಭಕ್ಷ,
ಬೀದರ ಖಾಜಾಯಿನಲ್ಲಾ, ರಾಯಚೂರ ಶರ್ಮಸಾಲವ್ ಹುಸೇನಿ, ನೀಲೂರ
ದಸ್ತಗೀರ್, ಗುಲಬರ್ಗಾ ಬಂದೇನವಾಜ್, ಚಿತಾಪುರ ಚಿತಾವಲಿ, ಮಳಖೇಡ
ಖಲಿಪತೂರ, ರಹಮಾನ, ಅಳಂದ ಶೇಖಮಹಮ್ಮದ, ಹಿರೇಬಾಗೇವಾಡಿ ಗೌಸ್-
ಸಾಹೇಬ, ಲಕ್ಷ್ಮೇಶ್ವರ ದೂಧಪೀರ್–ಮೊದಲಾದ ಮುಸಲ್ಮಾನ ಸಂತರ ಜಾತ್ರೆಗಳು
ಈಗಲೂ ಹೆಸರುವಾಸಿಯಾಗಿವೆ. ಅದೇ ರೀತಿ- ಮಳಖೇಡ ಟೀಕಾಚಾರ್ಯ, ಕವಿತಾಳ
ತ್ರ್ಯಂಬಕೇಶ್ವರ, ಬಾಳೇಕುಂದ್ರಿ ಪಂಥಮಹಾರಾಜ, ಮುಸಗಲ್ಲ ರಂಗನಾಥ, ರಾಯ-
ಚೂರ ರಾಮಲಿಂಗೇಶ್ವರ, ಹೊಸಪೇಟ ವೈಕುಂಠೇಶ್ವರ, ಜಾಲಿಹಾಳ ವೆಂಕಟರಮಣ,
ಬೆಳಗಾವಿ ರಾಮಲಿಂಗ, ಗಾಣಗಾಪುರ ದತ್ತಾತ್ರಯ, ಮಾಣಿಕನಗರದ ಮಾಣಿಕ-
ಪ್ರಭು, ಹಿರೇಮಣ್ಣೂರ ಚೆನ್ನಕೇಶವ ಮೊದಲಾದ ವೈಷ್ಣವರ ಜಾತ್ರೆಗಳೂ
ಸುಪ್ರಸಿದ್ಧವಾಗಿವೆ.

ಹುಬ್ಬಳ್ಳಿ ಗುರುಸಿದ್ಧೇಶ್ವರ, ಅಥಣಿ ಮುರುಘೇಂದ್ರ ಶಿವಯೋಗಿಗಳು, ಹುಬ್ಬಳ್ಳಿ
ಸಿದ್ಧಾರೂಢರು, ಗದಗ-ಡಂಬಳದ ತೋಂಟದಾರ್ಯರು, ರಂಭಾಪುರಿ ವೀರಗಂಗಾಧರ
ಜಗದ್ಗುರುಗಳು, ಸಾವಳಗಿ ಶಿವಲಿಂಗೇಶ್ವರರು, ಚಿಣಮಗೇರಿ ಮಹಾಂತೇಶ್ವರರು,
ಹಾರಕೂಡ ಚೆನ್ನಬಸವೇಶ್ವರರು, ರಟಕಲ್ಲದ ರೇವಣಸಿದ್ಧೇಶ್ವರರು.



ಚಿತ್ತರಗಿ-ಇಲಕಲ್ಲದ ವಿಜಯ ಮಹಾಂತಸ್ವಾಮಿಗಳು, ಕೊಟ್ಟೂರಿನ
ಕೊಟ್ಟೂರೇಶ್ವರರು, ಮೊದಲಾದ ಗುರು-ವಿರಕ್ತ ಮಹಾಸ್ವಾಮಿಗಳ ಜಾತ್ರೆಗಳು;
ಕಲಬುರ್ಗಿ ಶರಣಬಸವೇಶ್ವರ, ಬಸವಕಲ್ಯಾಣದ ಬಸವೇಶ್ವರ, ಉಳವಿ
ಚೆನ್ನಬಸವೇಶ್ವರ, ತೇರದಾಳ್ ಪ್ರಭುದೇವರು ಮೊದಲಾದ ಶರಣರ ಜಾತ್ರೆಗಳು.
ಕಡಕೋಳ ಮಡಿವಾಳೇಶ್ವರ, ಚೆಳ್ಳಗುರ್ಕಿ ಎರ್ರಿ, ತಾತ, ಧುಮ್ಮನಸೂರದ
ಸಿದ್ಧಪ್ರಭು, ನಿಡವಂಚಿ ವೀರಭದ್ರೇಶ್ವರ, ಕೂಡಲೂರು ಬಸವಲಿಂಗ ಶರಣರು,
ಘನಮಠದಾ, ಶಿಂಥಿಣಿಮೌನೇಶ್ವರರು, ಶಿಶುನಾಳ ಶರೀಫರು ಮೊದಲಾದ
ಮಹಾನುಭಾವರ ಜಾತ್ರೆಗಳು--ಉತ್ತರ ಕರ್ನಾಟಕದಲ್ಲಿ ಅತಿಸಡಗರದಿಂದ ಆಚರಿಸ
-ಲ್ಪಡುತ್ತ ಬಂದಿವೆ. ಯಾವುದೇ ಮತಧರ್ಮದ ಸಂತರ ಜಾತ್ರೆಯಾಗಲಿ, .ಎಲ್ಲ ಜಾತಿ
ಜನಾಂಗದ ಜನರೂಸೇರಿ ಜಾತ್ರೆ ನೆರವೇರಿಸುವುದರಿಂದ ಅವು ಜನಪದ ಜಾತ್ರೆಗಳಾಗಿ
ಯೇ ಕಂಗೊಳಿಸುತ್ತಿವೆ. ಜನ ತಮ್ಮ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳಲು
ಯಾವುದೇ ಮತಪಂಥದ ದೇವರಿಗೆ ಮೊರೆಹೋಗಲು ಹಿಂಜರಿಯುವುದಿಲ್ಲ. ಎಲ್ಲ ದೇವರು
ಅವರಿಗೆ ಸರಿಸಮಾನರು. ಹಿಂದು ಜನರು ಮುಸಲ್ಮಾನ ದೇವರಿಗೂ ಮುಸಲ್ಮಾನರು
ಹಿಂದೂ ದೇವರಿಗೂ, ಜೈನರು ವೈಷ್ಣವ ವೀರಶೈವ ದೇವರುಗಳಿಗೆ ನಡೆದುಕೊಳ್ಳುವ
ಸಂಪ್ರದಾಯ ಈಗಲೂ ಉಳಿದುಕೊಂಡು ಬಂದಿರುತ್ತದೆ. ಕೊಡೆಕಲ್ಲು ಬಸವಣ್ಣ ದೇವರ
ಕಲಬುರ್ಗಿ ಶರಣಬಸವೇಶ್ವರರು, ಶಿಂಥಿಣಿ ಮೌನೇಶ್ವರರು ಮೊದಲಾದ ದೇವರನ್ನು ಮುಸ
ಲ್ಮಾನರು ಅಷ್ಟೇ ಶ್ರದ್ಧೆಯಿಂದ ಪ್ರಾರ್ಥಿಸುತ್ತಾರೆ. ಕಲಬುರ್ಗಿ ಬಂದೇ ನವಾಜ, ಹದರಿ
ಪೀರ, ನೀಲೂರ, ದಸ್ತಗೀರಿ ಮೊದಲಾದ ಮುಸಲ್ಮಾನ ದೇವರುಗಳಿಗೆ ಹಿಂದೂ ಜನ
ಭಯ-ಭಕ್ತಿಗಳಿಂದ ನಡೆದುಕೊಳ್ಳುತ್ತಾರೆ. ಜಾಲಿಹಾಳ ವೆಂಕಟರಮಣ ಆದೇಷ್ಟೇ
ವೀರಶೈವ ಮನತನದವರಿಗೆ ಮನೆದೇವರಾಗಿದ್ದಾನೆ. ಉಳವಿ ಚೆನ್ನಬಸವಣ್ಣನಿಗೆ ಜೈನರು
ಹರಕೆಹೊತ್ತು ಗಂಡುಮಕ್ಕಳನ್ನು ಪಡೆದ ಉದಾಹರಣೆಗಳೂ ಇವೆ. ಹೀಗೆ ಉತ್ತರ-
ಕರ್ನಾಟಕದಲ್ಲಿ ನೆಲೆಯಾಗಿ ನಿಂತಿರುವ ಎಲ್ಲಾ ಜಾತಿ ಜನಾಂಗದ ಜನ ಅನ್ಯೋನ್ಯ
ಪ್ರೀತಿಯಿಂದ, ಸೌಹಾರ್ದದಿಂದ ಬದುಕುತ್ತಿರುವುದು ಧರ್ಮಪಂಥವೈಚಿತ್ರ್ಯವಾಗಿದ್ದು
ಧರ್ಮ ಸಮನ್ವಯಕ್ಕೆ ಸಾಕ್ಷಿಯಾಗಿದೆ. ವೈಯಕ್ತಿಕ ಸುಖಕ್ಕಾಗಿ ಆದರಂತೆ ಸಮಷ್ಟಿ
ಹಿತಕ್ಕಾಗಿ ಎಂಥ ತ್ಯಾಗಕ್ಕೂ ಶ್ರೀ ಸಾಮಾನ್ಯರು ಸಿದ್ಧರು. ಆವರಿಗೆ ಯಾವ
ಬಂಧನವೂ ಅಡ್ಡ ಬಾರದು.

ಜಾತ್ರೆಯಲ್ಲಿ ದೇವರ ಮೆರವಣಿಗೆಗೆ ಆದ್ಯತೆ ಉತ್ಸವಮೂರ್ತಿಯನ್ನು
ಪಲ್ಲಕ್ಕಿಯಲ್ಲಿ ಇಲ್ಲವೆ ತೇರಿನಲ್ಲಿ ಇಟ್ಟು ಮೆರೆಸುವರು. ತೇರಿಗೆ ರಥ ಎಂದೂ
ಕರೆಯುವರು. ಪಲ್ಲಕ್ಕಿ ಇಬ್ಬರು ಹೆಗಲ ಮೇಲೆ ಹೊರುವರು. ರಥ ಗಾಲಿಗಳಿಂದ
ಎಳೆದಾಗ ಮುಂದೆ ಹೋಗುವದು. ಎಳೆಯುವುದಕ್ಕೆ ಭಾರಿ ಹಗ್ಗ ಇಲ್ಲವೆ ಮೇಲಿಣಿ

ಇರುತ್ತವೆ. ನೂರಾರು ಜನ ಜನ ಸೇರಿ ತೇರು ಎಳೆಯುತ್ತಾರೆ. ತೇರಿಗೆ ಆಧ್ಯಾತ್ಮಿಕ-ಸಂಕೇತವೂ ಒಂದಿದೆ. ತೇರು ದೇಹಕ್ಕೆ ಪ್ರತೀಕ, ಸ್ಥೂಲ, ಸೂಕ್ಷ್ಮ, ಕಾರಣಶರೀರಗಳಿಂದ ಕೂಡಿದ ದೇಹವೆಂಬ ಈ ತೇರಿಗೂ ಮೂರು ಭಾಗ. ಷಡ್ ಸ್ಥಲಗಳಿಗೆ-ಸಂಕೇತವಾಗಿ ಆರು ಭಾಗಗಳನ್ನಾಗಿಯೂ ತೇರನ್ನು ಕಟ್ಟುವ ವಾಡಿಕೆ. ವರುವರುಷವೂ ಹೊಸ ಹೊಸ-ತೇರನ್ನು ರಚಿಸುವುದುಂಟು. ಒಮ್ಮೆ ತಯಾರಿಸಿದ ಹಲವಾರು ವರುಷ ಉಪಯೋಗಿಸುವವರೂ ಇದ್ದಾರೆ. ಕೆಲ ಜಾತ್ರೆಗಳು ೧೨ ವರ್ಷಕ್ಕೊಮ್ಮೆ ಇಲ್ಲವೆ ಮೂವತ್ತು ವರ್ಷಕ್ಕೊಮ್ಮೆ ಜರುಗುತ್ತಿರುವುದನ್ನು ಕಂಡಿದ್ದೇನೆ, ಕೇಳಿದ್ದೇನೆ. ಒಮ್ಮೊಮ್ಮೆ ತೇರಿನ ಕಟ್ಟಿಗೆ ಕೊಳೆತು-ತೇರು ಜಗ್ಗುತ್ತಿರುವಾಗ ಮೇಲೆ ಕುಳಿತಿರುವವರು ಬಿದ್ದು ಸತ್ತ ಉದಾಹರಣೆಗಳೂ ಇವೆ. ತೇರಿನ ತುದಿಗೆ ಕಳಸ ಇರುತ್ತದೆ. ಅದು ಅವರವರ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿ ಆ ಕಳಸ, ಹಿತ್ತಾಳೆ, ಬೆಳ್ಳಿ, ಇಲ್ಲವೆ ಬಂಗಾರದ ಕಳಸಗಳನ್ನು ಮಾಡಿಸಿದವರುಂಟು. ತೇರಿನ ಗಾಲಿಗಳು ಕಲ್ಲಿನಿಂದ ತಯಾರಿಸಿದವುಗಳಿರುತ್ತವೆ. ಗಾಲಿಗಳ ಮಧ್ಯದಲ್ಲಿ ಹಾಕಿದ ಚಟ್ಟುಗಳಮೇಲೆ ರಥ ಗೋಪುರದ ರೂಪದಲ್ಲಿ ಮೂರು ಇಲ್ಲವೇ ಆರು ಭಾಗ ಗಳಲ್ಲಿ ರಚನೆಗೊಳ್ಳುತ್ತದೆ. ಆ ರಥದಲ್ಲಿ ಅಲ್ಲಲ್ಲಿ ಕೆತ್ತನೆಯ ಕೆಲಸ, ಅಲ್ಲಲ್ಲಿ ಚಿತ್ರ ಗಳನ್ನು ಕೆತ್ತಿರುತ್ತಾರೆ. ಹಂಪಿಯ ವಿರೂಪಾಕ್ಷಲಿಂಗನ ತೇರು ಇದಕ್ಕೆ ಅಪ್ಪಟ ನಿದರ್ಶನವೆಂದು ಹೇಳಬಹುದು. ಸುಪ್ತ ಕಾಮವಾಸನೆಯ್ನು ಹೊರಹಾಕಿ ಪರಿಶುದ್ಧ ಭಾವನೆಯಿಂದ ದೇವಮಂದಿರದಲ್ಲಿ ಪ್ರವೇಶ ಪಡೆಯಬೇಕು ಎನ್ನುವ ತಿಳುವಳಿಕೆ ಜನತೆಗಿರಬೇಕು. ಇಹಲೋಕದ ಆಸೆ ಆಮಿಷಗಳನ್ನೆಲ್ಲಾ ಸುಟ್ಟಾಗ ಮಾತ್ರ ಪರಲೋಕದಲ್ಲಿ ಪ್ರವೇಶ ಎನ್ನುವ ಸಾಂಕೇತಿಕ ಅರ್ಥ ಇದಕ್ಕಿರಬೇಕು. ಆ ಮನುಷ್ಯನ ಯಾತ್ರೆ ತೇರು ಎಳೆಯುತ್ತದೆ, ಎನ್ನುವ ಅರ್ಥ ಹೊಂದಿದೆ. ಮೊದಲೇ ಗೊತ್ತು ಪಡಿಸಿದ ದಿನದಂದು ತೇರು ಎಳೆಯುತ್ತಾರೆ. ತೇರು ಜಗ್ಗಿದ ತರುವಾಯವೇ ಭಕ್ತ ಜನ-ತಮ್ಮ 'ಒಂದೋತ್ತು' ಮುರಿಯುತ್ತಾರೆ. ದೊಡ್ಡ ತೇರು ಜಗ್ಗುವ ಮುನ್ನಾ ದಿನ ಸಣ್ಣತೇರೊಂದನ್ನು (ಉಚ್ಚಾಯಿ) ಎಳೆಯುವ ವಾಡಿಕೆ ಯಾವ ಮತ-ಪಂಥದ ಭೇದವಿಲ್ಲದೆ ಎಲ್ಲರೂ ಭಾಗವಹಿಸುವರು. ಅಂತೆಯೆ ಜಾತ್ರೆ ಅದ್ವೈತಕ್ಕೆ ವಿಶ್ವಬಂಧುತ್ವಕ್ಕೆ ಸಾಕ್ಷಿ. ತೇರಿನ ಕಳಸಕ್ಕೆ ಹಣ್ಣು, ಕಾಯಿ, ಉತ್ತತ್ತಿ, ಇಲ್ಲವೆ ನಾರು ಎಸೆಯುವರು.

**ಜಾತ್ರೆಗಳ ವೈಶಿಷ್ಟ್ಯ:** ಜಾತ್ರೆಗೆ ಮೊದಲು ಆ ಊರ ಗ್ರಾಮದೇವತೆ. ದ್ಯಾಮವ್ವನ ಉಡಿತುಂಬುವರು. ಜಾತ್ರೆಯ ದಿನವನ್ನು, ಊರ ಹಿರಿಯರೆಲ್ಲರೂ ಸೇರಿ, ನಿಶ್ಚಯಿಸಿ, ಡಂಗೂರ ಹೊಡೆಸುವರು. ದನ ಕರುಗಳಿಗೆ ಬೇನೆ ತಟ್ಟಿದರೆ, ಊರು ಕೇರಿಗಳ ಜನರಿಗೆ ಯಾವುದೇರೋಗ ತಗುಲಿದರೆ ಅವುಗಳ ಪರಿಹಾರಕ್ಕಾಗಿ ಜಾತ್ರೋತ್ಸವ ನಡೆಸುತ್ತಾರೆ. ಅದಕ್ಕೆಂದು 'ವಾರ' ಬಿಡುತ್ತಾರೆ. ಅಂದಿನಿಂದ ಜಾತ್ರೆಯವರೆಗೂ ಯಾರೂ ಕರಿದ ಪದಾರ್ಥಗಳನ್ನು ತಯಾರಿಸತಕ್ಕದ್ದಲ್ಲ. ವಾರದ ದಿನ ಯಾರೂ ಕೆಲಸಕ್ಕೆ



ಹೋಗತಕ್ಕದಲ್ಲ, ಎಲ್ಲರೂ ಗುಡಿಯಮುಂದೆ ಇಲ್ಲವೆ ಚಾವಡಿಯ ಮುಂದೆ ಸೇರಿ, ಜಾತ್ರೆಯ ಸಿದ್ಧತೆ ನಡೆಸುವರು. ತೇರಿನ ಜಾತ್ರೆಯಿದ್ದರೆ, ತೇರಿನ ಗಾಲಿ ಏರಿಸುವರು. ಇದು ಜಾತ್ರೆಗೆ ನಾಂದಿ ಹಾಡಿದಂತೆ ಗಾಲಿ ಏರಿಸಿದ ಮೇಲೆ ಜಾತ್ರೆ ಯಾವುದೇ ಪರಿಸ್ಥಿತಿಯಲ್ಲೂ ನಡೆಯಲೇಬೇಕು. ಊರಲ್ಲಿಯೆ, ಜಾತ್ರೆಗೆ ಬೇಕಾದ ಖರ್ಚಿಗಾಗಿ, ವರ್ಗಣಿ (ಪಟ್ಟಿ) ವಸೂಲಿ ಮಾಡುವರು. ಇದು ಅವರವರ ಅಂತಸ್ತಿಗೆ ತಕ್ಕಂತೆ ಇರುತ್ತದೆ. ಬಡಿಗರು ತೇರಿನ ಕೆಲಸ ಪ್ರಾರಂಭಿಸುವರು. ಅವರಿಗೆ ಬೇಕಾದ ಕಟ್ಟಿಗೆಯನ್ನು ರೈತರು ತಂದು ಕೊಡುವರು. ಸಿಂಪಿಗರು ದೇವರ ಹಾಗೂ ತೇರಿನ ಬಟ್ಟೆಗಳನ್ನು ಹೊಲಿದು ಕೊಡುವರು ದೇವರಗುಡಿಯ ಪೂಜಾರಿಗಳು ತಮ್ಮ-ತಮ್ಮ ಗುಡಿಗುಂಡಾರಗಳಿಗೆ ಸುಣ್ಣ-ಬಣ್ಣ ಹಚ್ಚುವರು. ಊರವರೆಲ್ಲರೂ ತಮ್ಮಮನೆಗಳನ್ನು ಅಂದಗೊಳಿಸುವರು. ಬಯಲಾಟದ ಕಲಾಕಾರರು ಆಟದ ಕಥಾಪುಸ್ತಕಗಳನ್ನು ಪೂಜೆಮಾಡಿ ತಾಲೀಮು ನಡೆಸುವರು. ಕುಸ್ತಿಪಟುಗಳೂ ಗರಡೀಮನೆಯಲ್ಲಿ ತಾಲೀಮು ಹೆಚ್ಚಿಸುವರು.

ತೇರನ್ನು ಮೊದಲು ಕಲ್ಲಿನಿಂದ ತಯಾರಿಸುತ್ತಿದ್ದರು, ಬರಬರುತ್ತ ಮೇಲಿನ ಚಟ್ಟ ಕಟ್ಟಿಗೆಯದಾಗುತ್ತ ಗಾಲಿಗಳು ಕಲ್ಲಿನಿಂದ ತಯಾರಿಸಿದವುಗಳಾಗಿರುತ್ತಿದ್ದವು. ಇತ್ತೀಚಿಗೆ ಆ ಕಲ್ಲಿನ ಗಾಲಿಗಳ ಬದಲಾಗಿ ಕಟ್ಟಿಗೆಯ ಗಾಲಿಗಳನ್ನೇ ತಯಾರಿಸುತ್ತಿದ್ದಾರೆ. ಮುಂದೆ ತಯಾರಾದ ಇಲ್ಲವೆ ಪ್ಲಾಸ್ಟಿಕ್ ಗಾಲಿಗಳು ಬಂದರೆ ಸೋಜಿಗ ಪಡಬೇಕಾದದ್ದೇನಿಲ್ಲ. ಇದ್ದುಳ್ಳ ಊರವರುಬಳ್ಳಿಯಿಂದ ತೇರು ತಯಾರಿಸುವುದನ್ನೂ ಕಾಣುತ್ತೇವೆ. ಕಬ್ಬಿಣದ ತೇರುಗಳೂ ಇವೆ. ಹೀಗೆ ತೇರು ಸಿದ್ಧಗೊಳಿಸಲು ಊರಿಗೆ ಊರೇ ನೆರೆಯುತ್ತದೆ. ಊರವರ ನೆಂಟರಿಷ್ಟರೂ, ನೆರೆಹೊರೆಯ ಗ್ರಾಮಸ್ಥರೂ ಜಾತ್ರೆಗೆ ಬಂದು ಸೇರುತ್ತಾರೆ. ಉತ್ಸವ ಮೂರ್ತಿಯನ್ನು ತೇರಿನಲ್ಲಿಇಟ್ಟು ತೇರು ಎಳೆಯುತ್ತಾರೆ. ಬೇಡಿಕೊಂಡರೆ. ಇಲ್ಲವೆ ಜಾತ್ರೆಗೆ ಬಂದವರೆಲ್ಲರೂ ಹಣ್ಣು, ಕಾಯಿ, ಉತ್ಪತ್ತಿ ಇಲ್ಲವೆ ನಾರನ್ನು ತೇರಿಗೆ ಎಸೆಯುತ್ತಾರೆ. ತೇರು ಎಷ್ಟು ಮುಂದೆ ಜಗ್ಗಿರುತ್ತಾರೊ ಮತ್ತೇ ಅಷ್ಟೇ ಹಿಂದಕ್ಕೆ ಎಳೆದುಕೊಂಡು ಹೋಗುತ್ತಾರೆ. ಬಂದವರೆಲ್ಲರೂ ಕೈ ಮುಗಿದು ಬೆಂಡು ಬೆತ್ತಾಸ ಪಡೆದುಕೊಂಡು ದೇವರಿಗೆ ನೈವೇದ್ಯ ಅರ್ಪಿಸಿ, ಹೂ-ಕಾಯಿ-ಹಣ್ಣು ಅರ್ಪಿಸಿ ದಕ್ಷಿಣೆ ಯಿತ್ತು ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ಪಕ್ವಾನ್ನಗಳನ್ನು ಸೇವಿಸಿ ರಾತ್ರಿ ಹೊತ್ತು ಕಲಾಪ್ರದರ್ಶನಗಳನ್ನು ಕಂಡು ಸಂತೋಷಭರಿತರಾಗಿರುತ್ತಾರೆ. ಜಾತ್ರೆ ಬಂದ ದಿನದಿಂದ ಒಂದು ತಿಂಗಳ ವರೆಗೂ ಮುಂದುವರಿಯುತ್ತದೆ, ತೇರು ಒಂದೇ ದಿನ ಎಳೆಯಲ್ಪಟ್ಟರೂ ಜಾತ್ರೆಯಲ್ಲಿ ಸೇರಿದ ಅಂಗಡಿಗಳು ತಿಂಗಳುಗಟ್ಟಲೆ ಇರುತ್ತವೆ. ಎಲ್ಲ ತರದ ಅಂಗಡಿಗಳು ಸಾಲು ಸಾಲಾಗಿ ರಚನೆಗೊಂಡಿರುತ್ತವೆ. ಒಂದು ಕಡೆ ಉತ್ಸವ ಮೂರ್ತಿ ಮೆರವಣಿಗೆ ತೇರು ಇಲ್ಲವೆ ಪಲ್ಲಕ್ಕಿಯಲ್ಲಿ ನಡೆದುಹೋಗುತ್ತದೆ. ಇನ್ನೊಂದು ಕಡೆಗೆ ಹರಕೆ ಹೊತ್ತವರು ಅದನ್ನು ತೀರಿಸುವ, ದಿಂಡುರಿಕೆ ಉರುಳುವ, ಬತ್ತಲೆ ಸೇವೆ

ಸಲ್ಲಿಸುವ, ಸಿಡಿ ಆಡುವ, ಅಗ್ನಿತುಳಿಯುವ ಸಂಪ್ರದಾಯಗಳು ನಡದೇ ಇರುತ್ತವೆ.
ಶಸ್ತ್ರ ಹಾಕಿಕೊಳ್ಳುವ, ವಾದ್ಯ ಓಲಗ ನುಡಿಸುವ, ಕಾಯಿ ಕರ್ಪುರ ಅರ್ಪಿಸುವ
ಮುಡುಪು ಆಡುವ, ಹುಂಡಿಹಾಕುವ ಮೊದಲಾದ ಕಾರ್ಯಕ್ರಮಗಳು ಬಿಟ್ಟೂಬಿಡದೆ
ನಡೆದುಕೊಂಡು ಹೋಗುತ್ತವೆ. ತೇರಿನ ಹಸ್ತಕ್ಕೆ ಹಚ್ಚಿ ತೇರು ಎಳೆದರೆ ಮಕ್ಕಳಾ-
ಗದವರಿಗೆ ಮಕ್ಕಳಾಗುತ್ತವೆ ಎಂಬ ನಂಬಿಕೆಯೂ ಜನತೆಯಲ್ಲಿ ಮನೆಮಾಡಿ
ಕೊಂಡಿರುತ್ತದೆ.

ಅನುಗ್ರಹ ಇಲ್ಲವೆ ಆಶೀರ್ವಾದ ನೀಡುತ್ತ ಭಕ್ತರನ್ನು ಉದ್ಧರಿಸುವ ಪೀಠ-
ಸ್ಥರೂ, ಇಲ್ಲವೆ ಗುಡಿಯ ಅಧಿಕಾರಿಗಳು ಭಕ್ತರಿಗೆ ಆಶೀರ್ವಾದ ನೀಡಿ ಪುನೀತರ
ನ್ನಾಗಿ ಮಾಡುವ ಪುಣ್ಯಕಾರ್ಯದಲ್ಲಿ ತೊಡಗುತ್ತಾರೆ. ಕ್ಷುದ್ರದೇವತೆಗಳನ್ನು ಮುಂದೆ
ಮಾಡಿ ಕೆಲಸ್ವಾರ್ಥಿಗಳು ಮುಗ್ಧರನ್ನು ಸೆಳೆಯುವ, ಶೋಷಣೆಗೆ ಗುರಿಮಾಡುವ ಹೊಂ-
ಚನ್ನೂ ಹಾಕಿಕೊಂಡಿರುತ್ತಾರೆ. ಶಕ್ತಿದೇವತಾ ಕಥೆ, ಪೌರಾಣಿಕ ಕಥೆ, ಕಟ್ಟುಕಥೆ
ಗಳು ಹೀಗೆ ಜನತೆಯ ನಂಬುಗೆಯ ಮೇಲೆ ಬೆಳೆದುಕೊಂಡು ಬಂದಿರುವ ಆ ಈ
ದೇವರ ಜಾತ್ರೆಗಳು ಮಾನವನ ಬದುಕಿನ ಒಂದಂಗ ಎನ್ನುವ ರೀತಿಯಲ್ಲಿ ಮನು-
ಷ್ಯನಿಗೆ ಅಂಟಿಕೊಂಡು-ಬಂದಿರುತ್ತವೆ. ಭವಿಷ್ಯದ ಈ ಮಾತುಗಳನ್ನು ಜನ ಈಗಲೂ
ನಂಬುತ್ತಿರುವುದು ಒಂದುಸೋಜಿಗದ ಸಂಗತಿಯೇ. ಗದ್ದುಗೆಗೆ ಆಣೆಮಾಡಿಸುವ
ಸಂಪ್ರದಾಯವೂ ಇದೆ. ಸುಳ್ಳುಸತ್ಯಗಳ ಒರೆಗಲ್ಲಿಗೆ ಸಾಕ್ಷಿಇದು. ನ್ಯಾಯಾಧೀಶರ
ಆಜ್ಞೆಗಿಂತಲೂ ಇದು ಹೆಚ್ಚುಮಾನ್ಯವಾದದ್ದು ಇವರಿಗೆ.

ಜಾತ್ರೆಗೆ ಜನರ ಧಾರ್ಮಿಕ ಭಾವನೆಯ ಮೂಲಕಾರಣ. ಸಮಷ್ಟಿ ಹಿತದ
ಸಾಮಾಜಿಕ ಕಳಕಳಿಯಿಂದ ಕೂಡಿದ-ಸಾಂಸ್ಕೃತಿಕ ಬದುಕಿನ ಹಿನ್ನೆಲೆಯೂ ಇದಕ್ಕಿದೆ.
ಜಾತ್ರೆಯ ನೆಪದಿಂದ ಜನ ಒಂದೆಡೆ ಸೇರುವಂತಾಗುತ್ತದೆ. ಆ ಈ ಮಾತುಕತೆಗೆ-ಅನು
ಕೂಲ ವಾಗುತ್ತದೆ. ಸುದ್ದಿ ಸಮಾಚರಗಳಂತಹ ರೇಡಿಯೊ, ಟಿ. ವಿ. ಫೋನ್-ಪತ್ರ
ವ್ಯವಹಾರ, ತಾರಿ- ಮೊದಲಾದ ಅನುಕೂಲತೆಗಳಿಲ್ಲದ ಕಾಲದಲ್ಲಂತೂ ಜಾತ್ರೆಗಳೇ
ಮಧ್ಯಮಗಳಾಗಿದ್ದವು. ಈಗಲೂ ಕೂಡ ಅದೆಷ್ಟೋಜನರಿಗೆ ಅವು ಪ್ರಯೋಜನಕಾರಿ
ಯಾಗಿಯೇ ಇವೆ. ಪ್ರಾಪಂಚಿಕರಿಗೆ ಬೇಕು ಬೇಕಾದ ವಸ್ತುಗಳ ಮಾರಾಟ ಮಳಿಗೆ
ಗಳು ತೆರೆದಿರುತ್ತವೆ, ಖರೀದಿ-ವಿಕ್ರಿ ನಡೆಯುತ್ತದೆ. ಕಲಾಕಾರರು ತಮ್ಮ ಕಲಾಪ್ರ
ದರ್ಶನಕ್ಕಾಗಿಯೂ ವಸ್ತುಗಳ ಖರೀದಿಗಾಗಿಯೂ ಬಹುದೂರದೂರದಿಂದ ಜನ ಬಂದು
ಸೇರುವರು.

ಜಾತ್ರೆಗಳ ಲಾಭ ಇದ್ದಂತೆ-ನಷ್ಟವೂ ತಪ್ಪಿದ್ದಲ್ಲ. ಜಾತ್ರೆಯ ನೆಪದಲ್ಲಿ ಬಡ-
ಬಗ್ಗರಿಗೆ ಕೂಲಿಗೆ ರಜೆ, ಹೊಟ್ಟೆಗೆ ರಜೆ ಆಗಬಹುದೇ ? ದಿನಗೂಲಿಯ ಮೇಲೆಯೆ
ಬದುಕುವಂಥವರ ಜೀವನಕ್ಕೆ ಉಗಲು. ಮುಂದೆ ದುಡಿದು ತರಬಲ್ಲೆವು ಎಂಬ ಆಶಾ
ವಾದದ ಮೇಲಿಂದ ಅವರಿವರಲ್ಲಿ ಸಾಲ. ಸಂಬಂಧಿಕರು ಜಾತ್ರೆಗೆ ಬರುವುದರಿಂದ



ಖರ್ಚುಹೆಚ್ಚು. ಸಾಂಕ್ರಾಮಿಕ ರೋಗದ ಹಾವಳಿ, ಮಕ್ಕಳು ಮರಿಗಳನ್ನು ಕಳೆದುಕೊ
ಳ್ಳುವ ಭಯ. ಊರ ಜನರಲ್ಲಿ ವೈರತ್ವದ ಬೆಳವಣಿಗೆ ಯಾಗುವುದೂ ಉಂಟು. ದೋಪಾ
ರ್ಟಿಯ ಜನರಿದ್ದಲ್ಲಿ ಕೊಲೆ ಸುಲಿಗೆಗಳ ಹಾವಳಿ. ತೇರು ಎಳೆದವು, ದೇವರಿಗೆ ಹೂ-ಹಣ್ಣು-
ಕಾಯಿ ಏರಿಸಿದೆವು, ನೈವೇದ್ಯ ಸಮರ್ಪಿಸಿದೆವು ಎಂಬಸಮಾಧಾನದ ನಿಟ್ಟುಸಿರು.
ಮಕ್ಕಳಿಗೇನೋ ಮನರಂಜನೆ, ವ್ಯಾಪಾರಿಗಳಿಗೆ ಧನಲಾಭ, ಶ್ರದ್ಧಾವಂತರಿಗೆ ಪುಣ್ಯ
ಬರುತ್ತದೆಂಬ ನಂಬುಗೆ. ಸಾಹಿತಿ-ಕಲಾಕಾರರಿಗೆ ಪುರಸ್ಕಾರದ ಲಾಭ. ಪೂಜಾರಿಗಳಿಗೆ
ದಕ್ಷಿಣೆ, ನೈವೇದ್ಯದ ಲಾಭ ದೇವರಿಗೆ ಸುಣ್ಣ-ಬಣ್ಣದ, ಉಣ್ಣಿಮೆ, ಬಟ್ಟೆ-ಬರೆಗಳ ತಳಿರು
ತೋರಣದ ಶೃಂಗಾರ-ಹೀಗೆ ಜಾತ್ರೆ " ಜನ ಮರುಳೋ ಜಾತ್ರೆ ಮರುಳೋ " ಎಂ
ಬತೆ ನಡೆದೇ ಹೋಗುತ್ತದೆ. ಮಠ ಅಥವ ಗುಡಿ ಯಾವುದೇ ಜಾತ್ರೆಯಿರಲಿ, ಅಲ್ಲಿ
ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಇತ್ತೀಚೆಗೆ, ನಡೆಸುತ್ತ ಬರುತ್ತಿದ್ದಾರೆ. ಅರ್ಚನೆ-
ಅರ್ಪಣೆ ದರ್ಶನ-ಆಶೀರ್ವಾದಗಳೊಂದಿಗೆ ಉಪದೇಶ ಪರ ನಡಿಗಳನ್ನು ಕೇಳುವ ಅವ
ಕಾಶ ದೊರೆಯುತ್ತದೆ. ಬಯಲಾಟ ನಾಟಕ, ಗೊಂಬೆಯಾಟ, ದಾಸರಾ, ನೃತ್ಯ
ಸಂಗೀತ. ಗೀಗೀಮೇಳ, ಮೊದಲಾದ ಕಲಾ ಪ್ರದರ್ಶನಗಳು ನಡೆಯುತ್ತವೆ. ಹೀಗೆ
ದಿನನಿತ್ಯದ ಕೊಡುಕೊಳಿಕೆಯ ವ್ಯವಹಾರದ ಜೊತೆಗೆ ಕಲೆ ಸಂಸ್ಕೃತಿಯಿಂದ
ಮನರಂಜನೆ ಜಾತ್ರೋತ್ಸವಗಳಿಂದ ಶ್ರೀ ಸಾಮಾನ್ಯರಿಗೆ ಒದಗುತ್ತದೆ. ಕುಸ್ತಿ,
ಚಕ್ಕಡಿ, ನೇಗಿಲು ಮೊದಲಾದ ಭಾರ ಎತ್ತುವ ಸ್ಪರ್ಧೆಗಳೂ ಈ ಸಂದರ್ಭದಲ್ಲಿ
ನಡೆಯುತ್ತವೆ. ಇತ್ತೀಚಿಗೆ ಸರಕಾರಿ ಇಲಾಖೆಗಳಿಂದ ಕುಟುಂಬ ಯೋಜನೆ, ಆರಣ್ಯ
ಸಂರಕ್ಷಣೆ ಗರೀಬಿ-ಹಟಾವೊ, ೨೦ ಅಂಶ ಕಾರ್ಯಕ್ರಮ, ಸಾಕ್ಷರತೆ ಮೊದಲಾದ
ಸರಕಾರೀ ಮಟ್ಟದ ಪ್ರಚಾರ ಕಾರ್ಯಕ್ರಮಗಳೂ ನಡೆಯುತ್ತಿರುತ್ತವೆ.

ರಾಷ್ಟ್ರೀಯ ಭಾವೈಕ್ಯಕ್ಕೆ ನಾವೆಲ್ಲರೂ ಒಂದು ಎನ್ನುವ ಸಮರಸ ಜೀವನಕ್ಕೆ ಭಾಷಾ
ಬಾಂಧವ್ಯಕ್ಕೆ ಈ ಜಾತ್ರೆಗಳು ಸಹಾಯಕಾರಿಯಾಗಿವೆ. ಇಂದು ಮಹಾರಾಷ್ಟ್ರ
ದಲ್ಲಿರುವ ಸೊಲ್ಲಾಪುರದ ಸಿದ್ಧರಾಮ, ತುಳಜಾಪುರದ ಅಂಬಾಭವಾನಿ, ಖಜೂರಿಯ
ಖಂಡೋಬಾ, ಪಂಢರಪುರದ ವಿಠೋಬಾ-ಮೊದಲಾದ ಜಾತ್ರೆಗಳಿಗೆ ಕರ್ನಾಟಕದ
ಜನರೂ; ಕರ್ನಾಟಕದಲ್ಲಿಯ ಸವದತ್ತಿ ಎಲ್ಲಮ್ಮ, ಗಾಣಗಾಪುರದ ದತ್ತಾತ್ರೇಯ,
ಕಲಬುರ್ಗಿ ಶರಣಬಸವೇಶ್ವರ-ಮೊದಲಾದ ಜಾತ್ರೆಗಳಿಗೆ ಮಹಾರಾಷ್ಟ್ರದವರೂ;
ಆಂಧ್ರದ ತಿರುಪತಿ, ಶ್ರೀ ಶೈಲ ಮಂತ್ರಾಲಯಗಳಿಗೆ ಕರ್ನಾಟಕ ಮತ್ತು ಮಹಾ
ರಾಷ್ಟ್ರದ ಜನರೂ ಬಂದು ಸೇರುವುದು ನಾವೆಲ್ಲರೂ ಒಂದು ಎನ್ನುವ ವಿಶಾಲ
ಮನೋಭಾವನೆಗೆ ಸಾಕ್ಷಿಯಾಗಿರುತ್ತವೆ ಜನಪ್ರಿಯವಾದ ಉತ್ತರ ಕರ್ನಾಟಕದ
ಜಾತ್ರೆಗಳನ್ನು ಬಹಳಷ್ಟು ನೋಡಬಹುದಾಗಿದೆ.

●

## ನಾಕಂಡ ಶ್ರೀಗಳು

– ಸಾಧು ಶ್ರೀ ರಾಮದಾಸ್, ಎಂ.ಎ, (ತತ್ವಶಾಸ್ತ್ರ) ಅಯೋಧ್ಯಾ

[ ದಿ : 13-11-87 ರಂದು ಉತ್ತರ ಪ್ರದೇಶದ ಅಯೋಧ್ಯೆಯಿಂದ ಶ್ರೀ ರಾಮದಾಸ್ ಎಂಬ ಸಾಧುಗಳು ಶ್ರೀ ಕ್ಷೇತ್ರಕ್ಕೆ ಭೇಟಿಕೊಟ್ಟು ಶ್ರೀ ಶ್ರೀ ಗಳವರನ್ನು ದರ್ಶನ ಮಾಡಿದಾಗ ಹಿಂದಿ ಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸಿದ ಸುಂದರ ಅನಿಸಿಕೆಯನ್ನು ಅನುವದಿಸಿ ಇಲ್ಲಿ ಕೊಡಲಾಗಿದೆ ]

– ಸಂಗ್ರಹ. ಕೆ. ಬಸವರಾಜು

„ ನಾನು ಶ್ರೀ ಶ್ರೀ ಗಳವರನ್ನು ದರ್ಶನಮಾಡಿದೆ. ಸನ್ನಿಧಿಯವರು ಹತ್ತಿ ರವೇ ಆಸನವಿತ್ತು ಚಹಳ ಆತ್ಮೀಯತೆಯಿಂದ ಮಾತನಾಡಿಸಿದರು. ನಾನು ಪ್ರತಿ ದಿನ ಸು. 25 ಕಿ. ಮೀ. ದೂರ ಕಾಲ್ನಡಿಗೆಯಲ್ಲಿಯೇ ಪ್ರಯಾಣ ಮಾಡುತ್ತೇನೆ. ಆದರೆ ನಾನು ಯಾವ ಮಂತ್ರಿ,ಮಹೋದಯರನ್ನಾಗಲೀ ಪ್ರಧಾನಿಯನ್ನಾಗಲೀ ಭೇಟಿ ಮಾಡುವುದಿಲ್ಲ. ಮೇಲಾಗಿ ನಮ್ಮಹಿಂದೂ ಸನಾತನ ಧರ್ಮಮೂರ್ತಿಗಳನ್ನು ಮಾತ್ರ ಸಂದರ್ಶಿಸುತ್ತೇನೆ. ಇದುವರೆಗೆ ನಾನು ನೂರಾರುಮಂದಿ ಮಠಾಧೀಶರನ್ನು ದರ್ಶನ ಮಾಡಿದ್ದೇನೆ. ಇಷ್ಟು ವಿಶ್ವಾಸ ಪೂರ್ವಕವಾಗಿ, ಆತ್ಮೀಯವಾಗಿ ನನ್ನನ್ನು ಯಾರೂ ಮಾತನಾಡಿಸಿರಲ್ಲಿಲ್ಲ. ನಿಜವಾಗಿಯೂ ಶ್ರೀ ಸ್ವಾಮಿಗಳು ನಮ್ಮ ಹಿಂದೂ ಧರ್ಮದ ಸಾಕಾರ ಮೂರ್ತಿಯಂತೆ ಕಾಣಿಸಿದರು. ಅವರ ಆಕೃತಿ ವಿಶೇಷ ಹಾಗೂ ದಿವ್ಯ ವ್ಯಕ್ತಿತ್ವವನ್ನು ಒಮ್ಮೆಲೇ ನೋಡುತ್ತಿದ್ದಂತೆಯೇ ಗೌರವ ಹುಟ್ಟಿತು. ಮತ್ತು ಆಕರ್ಷಿತನಾದೆ. ಭಾರವಿಯ ಉಕ್ತಿ ಥಟ್ಟನೆ ಸ್ಮೃತಿ ಪಥಕ್ಕೀಳಿಯಿತು „ಸಂದರ್ಶನಂ ಲೋಕಗುರೋರಮೋಘಂ ತವಾತ್ಮಯೋನೇರಿವ ಕಿಂನದತ್ತೇ ? ನನಗೆ ಪ್ರಸಾದ ಬೇಡ, ವಸತಿ ಬೇಡ, ಏನೂಬೇಡ. ಪೂಜ್ಯರ ಎರಡು ನೂಳ್ನುಡಿ ಸಾಕು. ಅವರ ಈ ಪವಿತ್ರವಾದ ಕಾರ್ಯಕೊಠಡಿಯ ಮುಂಭಾಗದಲ್ಲಿಯೇ ಮಲಗುತ್ತೇನೆ ಆದರಂತೆ ಶ್ರೀ ಶ್ರೀ ಗಳವರ ಕಾರ್ಯಾಲಯದ ಮುಂಭಾಗದಲ್ಲಿಯೇ ಮಲಗಿದ್ದರು. ಈ ಶ್ರೀ ಮಠದ ಹೊರಗೊಳಗೆ ಸದಾ ಸುಳಿದಾಡುವ ವಿದ್ಯಾರ್ಥಿವೃಂದ, ಪ್ರಾರ್ಥನೆ, ಪ್ರಸಾದ ನಿಲಯಗಳನ್ನು ನೋಡಿ ನಾನು ಮಂತ್ರಮುಗ್ಧನಾದೆ.



## ನನ್ನ ಮೇಲೆ ಪ್ರಭಾವ ಬೀರಿದ ಪ್ರಾಧ್ಯಾಪಕ ಬಿ.ಎಂ. ಶ್ರೀಕಂಠಯ್ಯನವರು

– ವಿದ್ವಾನ್. ಹ.ಜ. ಶಿವಶಂಕರಪ್ಪ
ಮಧುವನಹಳ್ಳಿ, ಕೊಳ್ಳೆಗಾಲ ತಾ॥

ಶ್ರೀ ಎಂಬ ಕಾವ್ಯನಾಮದ ಪ್ರಾಧ್ಯಾಪಕ ಬಿ. ಎಂ. 'ಶ್ರೀ ಕಂಠಯ್ಯನವರ ಪ್ರಭಾವಕ್ಕೆ ನಾನು ಒಳಗಾದುದು ೧೯೩೦ ರಲ್ಲಿ. ಆವಾಗ ನಾನು ಬೆಂಗಳೂರಿನ ಇಂ ಟರ್ ಮೀಡಿಯಟ್ ಕಾಲೇಜಿನಲ್ಲಿ ವ್ಯಾಸಂಗ ಮಾಡತೊಡಗಿದ್ದೆ. ಅವರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರೂ, ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿ ಕೆಲಸ ಮಾಡುತ್ತಿದ್ದರು. ಕನ್ನಡಾಂಬೆಯ ವರಪುತ್ರರಾದ ಅವರ ಭಾಷಣಗಳು ಆಗಾಗ್ಗೆ ಕಾಲೇಜಿನಲ್ಲೂ ನಗರದ ಬೇರೆ ಬೇರೆ ಸ್ಥಳಗಳಲ್ಲೂ ನಡೆಯುತ್ತಿದ್ದವು. ಮೊದಲಿನಿಂ ದಲೂ ಕನ್ನಡದ ಅಭಿಮಾನಿಯಾಗಿದ್ದ ನಾನು ಅವರ ಭಾಷಣಗಳನ್ನು ಕೇಳಲು ತಪ್ಪದೆ ಹೋಗುತ್ತಿದ್ದೆ. ಆವಾಗ ನನಗೆ ಮೆಚ್ಚುಗೆಯಾದ ವಿಷಯಗಳನ್ನು ಒಂದು ಪುಸ್ತಕದಲ್ಲಿ ಬರೆದುಕೊಳ್ಳುವುದು ನನ್ನ ಹವ್ಯಾಸವಾಗಿತ್ತು. ಬಿಡುವಿನ ವೇಳೆಯಲ್ಲಿ ಅವುಗಳನ್ನು ಮತ್ತೆ ಮತ್ತೆ ಓದಿ ಮನನಮಾಡಿಕೊಳ್ಳುವುದರಲ್ಲಿ ನನಗೆ ಆಗುತ್ತಿದ್ದ ಆನಂದ ಅಪಾರ ಶ್ರೀ ಗಳ ಪ್ರಭಾವವು ನನ್ನ ಮೇಲಾಗುವುದಕ್ಕೆ ಇದು ಪ್ರಾರಂಭ.

ನಾನು ಸೀನಿಯರ್ ತರಗತಿಗೆ ಬಂದ ಮೇಲೆ ಅವರು ವಾರಕ್ಕೆರಡು ಬಾರಿ ಆಂಗ್ಲ ಕವನಗಳ ಬೋಧನೆಗಾಗಿ ಬರತೊಡಗಿದರು. ಅವು ನನಗೆ ರಸದೌತಣದ ಸಂದರ್ಭ ವಾಗಿದ್ದುವು. ಆಂಗ್ಲ, ಕನ್ನಡ ಭಾಷೆಗಳೆರಡರಲ್ಲೂ ಆಳವಾದ ಪಾಂಡಿತ್ಯ ಪಡೆದಿದ್ದ ಅವರು ಕೆಲವು ಸಂದರ್ಭದಲ್ಲಿ ತಾವು ಮಾಡಿದ್ದ ಆಂಗ್ಲ ಕವನಗಳ ಕನ್ನಡ ಭಾಷಾಂತರ ವನ್ನು ಭಾವಪೂರ್ಣವಾಗಿ ಹಾಡಿ ವಿದ್ಯಾರ್ಥಿಗಳನ್ನು ಭಾವಪರವಶರನ್ನಾಗಿ ಮಾಡುತ್ತಿ ದ್ದರು. ಅವರ ಇಂಗ್ಲೀಷ್ ಗೀತೆಗಳು ಎಂಬ ಹೊತ್ತಗೆಯ ಎಲ್ಲ ಕವನಗಳನ್ನು ಕಂಠ ಪಾಠ ಮಾಡಲು ಪ್ರೇರಣೆ ಮಾಡಿತ್ತು.

ಕನ್ನಡ ನಾಡಿನ ಗತವೈಭವವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದ ಶ್ರೀ ಗಳು ನಾಡಿನ ಉದ್ದಗಲಕ್ಕೂ ಸಂಚರಿಸಿ ತಮ್ಮ ಕಾಲದ ದುರ್ಗತಿಯ ಬಹುಮುಖಗ ಳನ್ನು ಅವಲೋಕಿಸಿದಾಗ ಕನ್ನಡಾಂಬೆಯನ್ನು ಹಿಂದಣ ಮೇಲ್ಮಟ್ಟಕ್ಕೆ ಏರಿಸಲು ತಾವೇನು ಮಾಡಬಹುದೆಂದು ಅಹರ್ನಿಶಿ ಚಿಂತಿಸಿದರು. ಆಗ ಅವರಿಗೆ ಬರಹ ಭಾಷ

ನನ್ನ ಆಸೆಯನ್ನು ಈಡೇರಿಸಿಕೊಳ್ಳಲು ಇದೇ ಸಮಯವೆಂದು ಭಾವಿಸಿದ ನಾನು ಕನ್ನಡ ಸಂಘವನ್ನು ಸ್ಥಾಪಿಸಲು ನನಗೆ ಅನುಮತಿ ಕೊಡುವುದಾದರೆ ಆ ಕೆಲಸಕ್ಕೆ ನಾನು ಸನ್ಮತಿಸುವೆನೆಂದೆನು. ವಿಶಾಲಮತಿಗಳಾದ ಅವರು ತಮ್ಮ ಇಕ್ಕಟ್ಟಿನ ಸ್ಥಿತಿಯನ್ನು ವಿವರಿಸಿ " ಶಾಲೆಯಿಂದ ಧನಸಹಾಯವನ್ನು ನಿರೀಕ್ಷಿಸಬೇಡಿ. ನಿಮ್ಮೆಲ್ಲಾ ಕಾರ್ಯಗಳಲ್ಲೂ ನನ್ನ ಪೂರ್ಣ ಬೆಂಬಲ ಇರುತ್ತದೆ" ಎಂದು ಹೇಳಿ ನನ್ನನ್ನು ಕೆಲಸಕ್ಕೆ ಸೇರಿಸಿಕೊಂಡೇಬಿಟ್ಟರು.

1799 ರ ವರೆಗೂ (ನಾಲ್ಕನೇ ಮೈಸೂರು ಯುದ್ಧ) ಮೈಸೂರಿನ ಅಂಗವಾಗಿದ್ದ ಕೊಳ್ಳೇಗಾಲ ತಾಲ್ಲೂಕು ಒಡೆದು ಆಳುವ ಆಂಗ್ಲರ ನೀತಿಯಿಂದಾಗಿ ತಮಿಳು ನಾಡಿಗೆ ಸೇರಿಸಲ್ಪಟ್ಟಿತು. ಅಂದಿನಿಂದ ಈ ತಾಲ್ಲೂಕಿನ ಅವನತಿ ಪ್ರಾರಂಭ. ಎಲ್ಲಾ ಇಲಾಖೆಗಳಲ್ಲೂ ತಮಿಳೇ ಪ್ರಾಧಾನ್ಯ ಪಡೆಯಿತು. ಜನರು ಗತ್ಯಂತರವಿಲ್ಲದೆ ತಮಿಳನ್ನು ಅಭ್ಯಾಸಿಸಲು ಪ್ರಾರಂಭಿಸಿದರು. ಇದಕ್ಕೆ ಮದ್ದು ಎಂದರೆ ಜನರಲ್ಲಿ ಕನ್ನಡತನವನ್ನು ಪ್ರಚೋದಿಸಿ ಬೆಳೆಸುವುದು. ಈ ಉದ್ದೇಶದಿಂದಲೇ ಕನ್ನಡ ಸಂಘವನ್ನು ಸ್ಥಾಪಿಸ ಬಯಸಿದ ನಾನು ಒಂದು ತಿಂಗಳೊಳಗೆ ಬೆಂಗಳೂರಿನಲ್ಲಿ ನನ್ನ ನೆಚ್ಚಿನ ಕನ್ನಡ ಅಧ್ಯಾಪಕರಾಗಿದ್ದ ಪ್ರೊ. ವಿ. ಸೀತಾರಾಮಯ್ಯನವರನ್ನು ಬರಮಾಡಿಕೊಂಡು ಕನ್ನಡ ಸಂಘದ ಉದ್ಘಾಟನೆ ಮಾಡಿಸಿದೆನು. ಅದು ಕೊಳ್ಳೇಗಾಲದ ಜನತೆಯ ಭಾಗ್ಯೋದಯದ ದಿವಸ ಎನ್ನಬಹುದು. ಅಂದಿನಿಂದ ತಿಂಗಳಿಗೊಮ್ಮೆ ಕನ್ನಡಾಂಬೆಯ ನೆಚ್ಚಿನ ಮಕ್ಕಳಿಂದ ಸಾರ್ವಜನಿಕ ಭಾಷಣಗಳು ಏರ್ಪಾಡಾದವು. ಸಹಸ್ರ ಸಂಖ್ಯೆಯಲ್ಲಿ ಜನರು ಸಭೆಗೆ ಬರತೊಡಗಿದರು. ಹೀಗೆ ಕನ್ನಡನಾಡಿನ ಉದ್ದಗಲದಲ್ಲಿದ್ದ 400 ಕ್ಕಿಂತ ಹೆಚ್ಚು ಮಹಾನ್ ವ್ಯಕ್ತಿಗಳಿಂದ 28 ವರ್ಷಗಳ ಕಾಲ ಈ ಆಂದೋಲನ ನಡೆಯಿತು. ಇದರ ಜೊತೆಗೆ ಕನ್ನಡ ಸಪ್ತಾಹ, ಗಡಿನಾಡ ಕನ್ನಡ ಸಮ್ಮೇಳನ ಅತ್ಯಂತ ವೈಭವದಿಂದ ಜರುಗಿದವು. ಪ್ರತಿವರ್ಷವೂ ಮೂರು ತಿಂಗಳ ಸಂಬಳವನ್ನು ಇದಕ್ಕಾಗಿ ವಿನಿಯೋಗಿಸುತ್ತಿದ್ದೆ. ಈ ಕನ್ನಡಪರಸಾಂಸ್ಕೃತಿಕ ಚಟುವಟಿಕೆಗಳಿಂದಾಗಿ ಶಾಲೆಯಲ್ಲಿ ವಿದ್ಯಾರ್ಥಿಗಳಿಗೂ ನನಗೂ ನಿಕಟ ಸಂಬಂಧ ಏರ್ಪಟ್ಟಿತು.

ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ನಾನು ಕೊಡುತ್ತಿದ್ದ ಶಿಕ್ಷಣವು ಅವರ ಹೃದಯ ಮನಸ್ಸುಗಳನ್ನು ಅಭೂತಪೂರ್ವರೀತಿಯಲ್ಲಿ ವಿಕಸನಗೊಳಿಸಿತ್ತು. ಕನ್ಯಾಕುಮಾರಿಯಿಂದ ಹಿಮಾಲಯದವರೆವಿಗೆ ಶಾಲಾಮಕ್ಕಳನ್ನು ಆಗಾಗ್ಗೆ ಪ್ರವಾಸಕ್ಕೆ ಕೊಂಡೊಯ್ದುದು, ಅಲಹಾಬಾದ್, ಮದರಾಸ್, ಹೈದರಾಬಾದ್‌ಗಳಲ್ಲಿ ಪ್ರವಾಸ ಮಾಡಿದುದು ಇತ್ಯಾದಿ ಕಾರ್ಯಗಳಿಂದ ಗುರುಶಿಷ್ಯರೊಳಗೆ ಬಾಂಧವ್ಯ ಬೆಳೆಯಿತು.



ನನಗಾಗಿ ಅವರು ಏನು ಮಾಡಲು ಸಿದ್ಧರಾದರು. ತತ್ಪರಿಣಾಮವಾಗಿ ಕೊಳ್ಳೇಗಾಲ ತಾಲ್ಲೂಕು ಮತ್ತೆ ಹಳೆಯ ಮೈಸೂರಿನಲ್ಲಿ ಸೇರುವಂತೆ ಮಾಡಲು ಮದರಾಸು ಮತ್ತು ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಕಾಮರಾಜನಾಡಾರ್ ಮತ್ತು ಎಸ್. ನಿಜಲಿಂಗಪ್ಪನವರು ಅನಿವಾರ್ಯವೆಂದು ಮನಗಂಡು ಉಭಯ ಸರಕಾರಗಳ ಸಮ್ಮತಿಯಿಂದ ಕೊಳ್ಳೇಗಾಲ ತಾಲ್ಲೂಕು ಮತ್ತೆ 1956 ರಲ್ಲಿ ಮೈಸೂರಿಗೆ ಸೇರುವಂತೆ ಮಾಡಲಾಯಿತು. ಇದನ್ನು ನೋಡಿ ಅಸೂಯೆಗೊಂಡ ಕೆಲವರು ನನ್ನನ್ನು ಕೊಲೆ ಮಾಡಲು ಸಂಕಲ್ಪಿಸಿದರು, ನನ್ನ ರಕ್ತದಿಂದಲ್ಲದೆ ತಮಿಳು ನೆಲ ತಣಿಯದೆಂದು ಆರ್ಭಟ ಮಾಡಿದರು. ನಾನು ರಾಜಕೀಯದಲ್ಲಿ ಧುಮುಕಿ ಕರ್ತವ್ಯ ಪಾಲನೆ ಮಾಡುತಿಲ್ಲವೆಂದು ಇಲಾಖೆಗೆ ದೂರಿತ್ತರು. ಆದರೆ ಇದೆಲ್ಲಾ ಬಿಸಿಲಿನ ಮಂಜಿನಂತೆ ಕರಗಿಹೋದುವು. ಕರ್ನಾಟಕ ಸರ್ಕಾರದವರು ನನಗೆ ಮಾಸಿಕ ಗೌರವಧನವಿತ್ತು ಸತ್ಕರಿಸಿದರು. ಅಣ್ಣ ಮಾಸ್ತಿಯವರೇ ಮೊದಲಾದವರು ಶಿವಶಂಕರಪ್ಪನ ಕೊಳ್ಳೇಗಾಲವೆಂದು ಹೆಮ್ಮೆಯಿಂದ ಕರೆಯತೊಡಗಿದರು. ರಾಜ್ಯ ಪುನರ್ವಿಂಗಡನಾ ಮಂಡಲಿಯವರು ಬೃಹತ್ ಸಭೆಯಲ್ಲಿ ನನ್ನನ್ನು ಸನ್ಮಾನಿಸಿದರು. ಆದರೆ ನಾನು ಮಾತ್ರ ಕುಗ್ಗು ಹಿಗ್ಗುಗಳಿಲ್ಲದೇ ಒಂದೇ ರೀತಿಯಲ್ಲಿ ಕನ್ನಡಮ್ಮನ ಸೇವೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದೇನೆ. ಇದಕ್ಕೆ ಪೂಜ್ಯ ಬಿ. ಎಂ. ಶ್ರೀಯವರು ನನ್ನ ಮೇಲೆ ಬೀರಿದ ಪ್ರಭಾವವೇ ಕಾರಣ. ಅವರ ಆತ್ಮಕ್ಕೆ ಅನಂತ ನಮನಗಳನ್ನು ಈ ಮೂಲಕ ಸಲ್ಲಿಸಬಯಸುತ್ತೇನೆ. ●




– ಓಂಕಾರ

ಉಡುತಡಿಯ ಮಡಿಲಲ್ಲಿ ಬೆಳೆದ ಭಕ್ತಿಯ ಹೂವೆ
ವೃಥಭಕ್ತಿ ಮೈದಳೆದ ಮುಗ್ಧಪ್ರೇಮದ ಠಾವೆ
ಹರನೋರ್ವನೇ ತನಗೆ ನಿಜಗಂಡನೆಂದವಳೆ
ಶರಣಸತಿ-ಲಿಂಗಪತಿ ಗುರುಭಾಷ್ಯವಾದವಳೆ
ಕಲ್ಯಾಣಕೈತಂದ ಘನವಚನ ಕೌಸ್ತುಭವೆ
ಸಲ್ಲಲಿತದಧ್ಯಾತ್ಮ ಸಾಹಿತ್ಯ ಸೌರಭವೆ
ಪ್ರಕೃತಿ ಪಾವನ ವಾಯ್ತು ನಿನ್ನಮಲ ಪದ ಸೋಂಕಿ
ಸುಕೃತಿ ನೀನಾದೆಯಾ ಮೋಹಪಾಶವ ನೂಂಕಿ

ಪ್ರಕೃತಿ ಚೇತನಗಳಲಿ ಚೆನ್ನನರಸಿದ ಚೆನ್ನೆ
ವಿಕೃತಿಗೊಳಗಾಗದಲೆ ಬಾಳ್ದ ಗುಣ ಸಂಪನ್ನೆ
ಕನ್ನಡದಿ ನೀನಾದೆ ಪ್ರಪ್ರಥಮ ಕವಯಿತ್ರಿ
ಸನ್ನುತಳೆ ತವನಾಮವೆಮಗಾಯ್ತು ಗಾಯತ್ರಿ
ಶ್ರೀ ಗಿರಿಯ ಶಿವಕನ್ಯೆ ಸರ್ವಜನ ಸನ್ಮಾನ್ಯೆ
ಬಾಗಿ ನಮಿಪೆವು ಚೆನ್ನೆ ನೀಡುಸದ್ಗತಿಧನ್ಯೆ "




ತಾರೆ ನೀಹಾರಿಕೆಯು
ಗ್ರಹ ಕೋಟಿ ತಂಡಗಳು
ನಿನ್ನ ನಿಲವಿನೊಳಡಗಿ
ಬಟ್ಟೆ ಬಯಲಾಗಿರಲು 1

ಆವ ಗುಡಿಯನು ಕಟ್ಟಿ
ಆವ ಮೂರ್ತಿಯನಿರಿಸಿ,
ಅರ್ಚಿಸಸಲಿ ದೇವ !2

ಮನುಜನೆದೆಯಲಿ ಮೂಡಿ
ಸಮ್ಮಿಳಿತ ಭಾವದಲಿ,
ನೀನೆ ಲಯವಾಗುತಿರೆ,
ನರನೆ ಮರೆಯಾಗುತಿರೆ, 3

ಆವ ಹೃದಯವ ಹೊತ್ತು,
ಆವ ಪೀಠದೊಳಿರಿಸಿ,
ಪೂಜಿಸಲಿ ದೇವ ! 4



ಕಡಲ ತೆರೆಯೊಳು ನೆರೆದು
ನದಿಯ ನೀರಲಿ ನಿಂದು
ಪೆರ್ದೊರೆಯ ಕಡಲಾಗಿ
ಪ್ರಳಯ ಜಲದೊಳಗಾಡೆ, 5

ಕಾಡೆಲ್ಲ ಹೂವಾಗಿ
ನಾಡೆಲ್ಲ ಸೀನಾಗಿ
ಕಂಪು ಚೆಲ್ಲುತಲಿರಲು
ಚೆಲುವು ಚಿಮ್ಮುತಲಿರಲು, 7

ಕೋಟಿ ತಾರಕೆ ಮಿನುಗೆ,
ಸಾಲು ದೀವಿಗೆ ತೋರೆ,
ಕಣ್ಣು ಮಿಟುಗಿಸಿ ನಗುವ
ನಿನ್ನ ಬೆಳಕೇ ಬೇಗೆ, 9

ಹಗಲೆಲ್ಲ ರವಿ ಯುರಿದು
ಇರುಳೆಲ್ಲ ಶಶಿ ಬೆಳಗಿ,
ಧೂಪವೇರಿಸುತಿರಲು,
ವಿಶ್ವ ನಾಚುತಲಿರಲು 11

ಉಷೆ ಸಂಜೆ ನೀರೆಯುರು
ಮಂಗಳವ ಹಾಡುತಿರೆ
ವಿಶ್ವ ಭ್ರಮಣದೊಳಿರಿಸಿ
ನಗುವ ನಾಟ್ಯದ ಗುರುವೆ 14

ಆವಗಂಗೆಯ ತಂದು
ಆರುಮೀಯಲಿಕೆಂದು
ತಂದಿರಿಸ ಬಲ್ಲೆ! 6

ಆವ ಹೂವನು ಕಿತ್ತು,
ಆರ ಚರಣದೊಳಿಟ್ಟು,
ಪೂಜಿಸಲಿ ದೇವ! 8

ಆವ ದೀಪವ ಹಚ್ಚಿ
ಆರ ಬದಿಯೊಳಗಿಟ್ಟು
ಬೆಳಗಿಸಲಿ ದೇವ! 10

ಆವ ಧೂಪವ ಹಾಕಿ
ಆರ ಪೂಜಿಸಲೆಂದು
ಉರಿಯಿಸಲಿ ದೇವ ! 12

ಆವ ರೀತಿಯೊಳಾನು
ಆರ ಸಂತಸಕೆಂದು
ಹಾಡಿ ತಣಿಸಲಿ ದೇವ! 13

— " ನಂದಕಿಶೋರ "






# ಗ್ರಾಮಾಂತರ ಬಸವ ಜಯಂತಿ-207-215

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು

ಆತ್ಮೀಯ ಶರಣ ಬಂಧು,

ಬಸವ ತತ್ವ ಪ್ರಚಾರದ ಯಾತ್ರೆಗೆ ಪೂರ್ಣವಿರಾಮ ವೆಂಬುದೇ ಇಲ್ಲ. ಒಂದು ದಿಕ್ಕಲ್ಲ, ಒಂದು ಕಡೆಯಲ್ಲ. 'ಸಾವಿಲ್ಲದ, ಕೇಡಿಲ್ಲದ, ಭವವಿಲ್ಲದ, ಭಯವಿಲ್ಲದ ":—ನಿತ್ಯಯಾತ್ರೆಯದು. ಕರ್ನಾಟಕದ ಅಮೂಲ್ಯ ಸಂಪತ್ತು ಶರಣ-ಸಿದ್ಧಾಂತ. ಅದು ಜೀವ ತುಂಬಿ ಪ್ರಜ್ವಲಿಸುವಂತೆ ತಮ್ಮ ನುಡಿ–ನಡೆಗಳ ಮೂಲಕ ಜಗತ್ತಿಗೆ ತೋರ್ಪಡಿಸಿದವರು ಬಸವಾದಿ ಪ್ರಮಥರು. ಆಧುನಿಕ ಯುವಜನಾಂಗಕ್ಕೆ ಸೂಕ್ತರೀತಿಯಲ್ಲಿ ವೈಚಾರಿಕ ದೃಷ್ಟಿಯನ್ನು ತುಂಬಿ ಆ ಸಿದ್ಧಾಂತದ ಪರಿಚಯ ಮಾಡಿ ಕೊಡುವ ಸಲುವಾಗಿ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಗಳು ತಮ್ಮ ಸೇವಾ ಜೀವನದಲ್ಲಿ ಇತ್ತೀಚೆಗಂತೂ ಶ್ರಮವರಿಯದೆ ನಡೆದಿದ್ದಾರೆ. ಪೂಜ್ಯರಿಗೆ ಬಸವ ತತ್ವಪ್ರಚಾರ ತಮ್ಮ ಲಿಂಗ ಪೂಜೆಯಷ್ಟೆ ಪವಿತ್ರವಾಗಿದೆ. ಅದಕ್ಕಾಗಿ ಹಳ್ಳಿ ಹಳ್ಳಿಗಳೆನ್ನದೆ, ಹಗಲು ರಾತ್ರಿಗಳೆನ್ನದೆ ಕಾಯಕ-ದಾಸೋಹಗಳಿಗೆ ಆಧುನಿಕ ಅರ್ಥಶಾಸ್ತ್ರದ ದೃಷ್ಟಿಯಿಂದ ವಿಶೇಷ ವ್ಯಾಖ್ಯಾನ ನೀಡುತ್ತ ನಾಡಿನ ಎಲ್ಲೆಡೆಗೆ ಕಲಾಯಾತ್ರೆ ಹೊರಟಿದ್ದಾರೆ. 1988ರಲ್ಲಿ ಸಕಲೇಶಪುರ [ ಎಷ್ಟು ಭಾರಿ ಬಸವ ಜಯಂತಿ ಆಚರಿಸಿದರೂ ಅಲ್ಲಿನ ಬಸವತತ್ವಾಭಿಮಾನಿಗಳಿಗೆ ತೃಪ್ತಿಯೇ ಸಾಲದು ! ]ದಲ್ಲಿ 12.5. 88ರಂದು ಜಯಂತಿ ಆಚರಣೆ ನಡೆದಾಗ ಪೂಜ್ಯ ಮಾತೆ ಮಹಾದೇವಿ; ಶಾಸಕ ಶ್ರೀ ಬಿ.ಬಿ. ಶಿವಪ್ಪ, ಶ್ರೀ ಗೊ. ರು. ಚನ್ನಬಸಪ್ಪ, ಪೂಜ್ಯ ಶ್ರೀ ಶ್ರೀ ಆದಿಚುಂಚನಗಿರಿ ಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ-ಸ್ವಾಮಿಗಳವರು ಭಾಗವಹಿಸಿ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದರು.

ದಿ.14.5.88ರಂದು ಅರಕಲಗೂಡು ತಾಲ್ಲೂಕು ಕಟ್ಟೆಯ ಹೋಬಳಿ ಬ್ಯಾಡರ-ಹಳ್ಳಿಯ ಜಯಂತಿ ಆಚರಣೆಯಲ್ಲಿ ಮಾಜಿ ಶಾಸಕರಾದ ಹಾಸನದ ಶ್ರೀ ಕೆ.ಎಂ.-ರುದ್ರಪ್ಪನವರು ಅತಿಥಿಗಳಾಗಿ ಆಗಮಿಸಿದ್ದರು.

26.5,88ರಂದು ನೆಲಮಂಗಲ ತಾಲ್ಲೂಕಿನ ಹೊನ್ನರಾಯನಹಳ್ಳಿಯಲ್ಲಿ ನಡೆದ ಜಯಂತಿ ವಿಶೇಷ ವೈಭವ ಪೂರ್ಣವಾಗಿದ್ದಿತಲ್ಲದೆ ಅನೇಕ ಗಣ್ಯರ ಸಮಾವೇಶವೆನಿಸಿತ್ತು. ಜಿಲ್ಲಾ ಪರಿಷತ್ ಸದಸ್ಯರಾದ ಶ್ರೀ ಕೆಂಪಣ್ಣನವರ ಸೇವಾವ್ಯವಸ್ಥೆ ಅಚ್ಚುಕಟ್ಟಾಗಿದ್ದು

ಸಭಿಕರ ಸಂತೋಷಕ್ಕೆ ಕಾರಣವಾಯಿತು. “ ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿ
ರಸ ವೆಂ ಬ ತೈಲವನೆರೆದು ಆಚಾರವೆಂಬ ಬತ್ತಿಯನಿಕ್ಕಿ ಬಸವಣ್ಣನೆಂಬ ಜ್ಯೋತಿಯ
ಮುಟ್ಟಿಸಿದಂದಿ ” ನಿಂದ ಇಂ ದಿ ನ ವ ರೆ ಗೂ ದೀಪ ಬೆಳಗಿಸುತ್ತಲೇ ಬಂದಿದ್ದೇವೆ,
ಆದರಿನ್ನೂ ಮನುಕುಲದ ಮೌಢ್ಯ ಹೋಗಿಲ್ಲ, ಜಾಡ್ಯ ಹರಿದಿಲ್ಲ ಇದಕ್ಕಾಗಿ ಬಸವ-
ತತ್ವಗಳ ಸಾಕಾರ ಸ್ವರೂಪವಾಗಿರುವ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀ ಗಳು ಬಸವ-
ಯಾತ್ರೆಯನ್ನು ಕೈಗೊಂಡಿದ್ದಾರೆ ಎಂದು ಉದ್ಘಾಟಿಸಿದರು ಪ್ರೊ। ಜಿ.ಎಸ್.-
ಸಿದ್ಧಲಿಂಗಯ್ಯನವರು “ ಬಸವಣ್ಣನವರ ಸಂದೇಶದಿಂದ ಜೀವನಮೌಲ್ಯಗಳನ್ನು
ನಾವು ಬೆಳೆಸಿಕೊಳ್ಳುವುದೇ ಅವರಿಗೆ ನಾವು ತೋರಿಸಬಹುದಾದ ಭಕ್ತಿ ಗೌರವ
ಎಂಬುದಾಗಿ ಬೆಂಗಳೂರು ಜಿಲ್ಲಾ ಪರಿಷತ್ ಅಧ್ಯಕ್ಷರಾದ ಶ್ರೀ ನಾರಾಯಣಸ್ವಾಮಿ
ಮಾತನಾಡಿದರು.

ಬಸವಣ್ಣ ಒಪ್ಪುವಂತೆ, ನಮ್ಮ ಪೂಜ್ಯ ಗುರುಗಳು ಒಪ್ಪುವಂತೆ ಒಗೆತನವ
ಮಾಡುವೆ ಎಂಬುದಾಗಿ ಶ್ರೀ ಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ-
ಸಿದ್ಧಲಿಂಗಸ್ವಾಮಿಗಳುನುಡಿದರು.

“ ನಿಮ್ಮಮುಂಡಿಗೆ ಹೂವತಾರದೆ ಹುಲ್ಲತಾರೆನು ” ಎಂಬ ಪೂಜ್ಯ ಶ್ರೀ ಶ್ರೀ-
ಸಿದ್ಧಲಿಂಗಸ್ವಾಮಿಗಳ ಮಾತು ಗಂಧಪರಿಮಳ ಪೂರ್ಣವಾಗಿ ಅರಳಲಿ ಎಂದು
ಹಾರೈಸಿದರು ಕನಕಪುರದ ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ-
ಸ್ವಾಮಿಗಳು.

“ ಆನೆ ನಿರಾಟದಲಿ ಮೀನಕಂಡಂಜವುದೆ ? ” ಎಂಬಂತೆ ಬಾಳಿದ ಬಸವಣ್ಣ
ನವರ ಹಾದಿಯಲ್ಲಿ ಸಾಗಿರುವ ಪೂಜ್ಯ ಶ್ರೀ ಶ್ರೀ ಗಳು ಕಾಯಕವನ್ನೆ ಶಿವಯೋಗ-
ವೆಂದು ಗೌರವಿಸಿರುವ ಅಪೂರ್ವ ಪುಣ್ಯ ಪುರುಷರು. ಶ್ರೀ ಶ್ರೀ ಗಳವರ ದಿನಚರಿಯನ್ನು
ಒಂದು ತಿಂಗಳು ಯಾರಾದರೂ ಅನುಸರಿಸಿದ್ದೆ ಆದರೆ ಅಂಥವರ ಕಾಲು ಮುಟ್ಟಿ
ನಮಸ್ಕರಿಸುತ್ತೇನೆ ” –ಎಂದು ಭಕ್ತಿಸವಿ ನುಡಿದರು ಮಾಜಿ ಸಚಿವರಾದ ಸಾಗರ-
ನಹಳ್ಳಿ ಶ್ರೀ ರೇವಣ್ಣನವರು.

ಶ್ರೀ ಸಿದ್ಧಗಂಗಾ ಮಠಕ್ಕೆ ಶುದ್ಧಿಯಿಂದ ಬಂದ ಸಿದ್ಧಿಯಿದೆ ಎನ್ನುತ್ತ ”
ಬುದ್ಧಿಯವರು ಕಳ್ಳರನ್ನು ಗುರುತಿಸುವುದು ಬಹಳ ದಿನಗಳ ಮೇಲೆ” ಎಂದು ಹೇಳಿದರು
ಪಂಡಿತ ಶ್ರೀ ಚೆನ್ನಪ್ಪ ಎರೇಸೀಮೆಯವರು

ನಳಂದ ವಿಶ್ವವಿದ್ಯಾಲಯಕ್ಕೆ ಹೋಲಿಸುತ್ತ ಸರ್ವಜನಾಂಗವನ್ನು ಪ್ರೀತಿಯ ಕಣ್ಣು
ಗಳಿಂದ ನೋಡಿ ಬಾಚಿ ತಬ್ಬಿಕೊಂಡ ಸಂಸ್ಥೆ ಶ್ರೀ ಸಿದ್ಧಗಂಗಾ ಮಠ ಎಂದವರು
ಮಾಜಿ ಶಾಸಕರಾದ ಶ್ರೀ ಎಸ್. ಚನ್ನಬಸವಯ್ಯನವರು.



ಗುಹೇಶ್ವರ ಲಿಂಗಕ್ಕೆ ವಿಳಾಸವಾದ ಬಸವಣ್ಣ ಭುವನದ ಭಾಗ್ಯವಾಗಿ ಬೆಳೆದು
ಜನಪರವಾದ ಧರ್ಮವನ್ನು ಬಿತ್ತಿ ಸಹಸ್ರಾರು ಶರಣರನ್ನು ಬೆಳೆದು ಹೋದ
‘ ವೀರಶೈವ ನಿರ್ಣಯ ಪರಮಾವತಾರ ’ ಎಂಬುದಾಗಿ ಬೇಲಿಮಠದ ಪೂಜ್ಯ
ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು ನುಡಿದರು.

ನಮ್ಮ ಜೀವನದ ಉತ್ಥಾನಕ್ಕೆ, ಉದ್ಧಾರಕ್ಕೆ, ಆತ್ಮ ಶೋಧನೆಗೆ, ಶುದ್ಧ
ಸಂಸ್ಕಾರಕ್ಕೆ ಬಸವಜಯಂತಿ ಆಚರಣೆ ನಡೆದಷ್ಟೂ ಅಗತ್ಯವಿದೆ ಎಂದು, ಮುಂದು
ವರಿದು ಜೀವನವನ್ನು ತುಚ್ಛೀಕರಿಸದೆ ಬದುಕುವ ಕಲೆಯನ್ನು ಕಲಿಸಿದ ಮಾನವ-
ತಾವಾದಿಯಾದ ಬಸವಣ್ಣನವರ ಮಾರ್ಗ ನಮ್ಮದಾಗಬೇಕು ಎಂದು ಆಶೀರ್ವಚನ
ನೀಡಿದರು ಪರಮ ಪೂಜ್ಯರು.

ದಿ.30.5.88 ರಂದು ನೆಲಮಂಗಲ ತಾಲ್ಲೂಕು ಅರ್ಜುನಬೆಟ್ಟಹಳ್ಳಿಯಲ್ಲಿ
ಜಯಂತಿ ನಡೆದಾಗ ಮಂಡಲ ಪ್ರಧಾನರಾದ ಶ್ರೀ ವೆಂಕಟರಾಯಪ್ಪನವರು ಮುಖ್ಯ
ಅತಿಥಿಗಳಾಗಿ ಆಗಮಿಸಿದ್ದ ಪರಮ ಪೂಜ್ಯರ ಅಮೂಲ್ಯ ಸೇವಾ ಜೀವನ
ಪರಿಚಯುವನ್ನು ಮಾಡಿಕೊಡುತ್ತ “ ನಾವು ಕಂಡ ಬಸವಣ್ಣನವರು ” ಮಹಾ
ಸ್ವಾಮಿಗಳು ಮಾತ್ರ ಎಂದರು.

ನಮ್ಮ ಪಾಲಿಗೆ ಬಂದ ಕರ್ತವ್ಯಗಳನ್ನು ಶ್ರದ್ಧೆಯಿಂದ ಪೂರೈಸುವುದೇ ನಾವು
ಮಾಡಬೇಕಾದ ಪೂಜೆ ಎಂಬುದಾಗಿ ಪರಮ ಪೂಜ್ಯರು ಆಶೀರ್ವಚನ ನೀಡಿದರು.

ದಿ. 11.6, 88 ರಂದು ಬೈಯಂಡನಹಳ್ಳಿಯಲ್ಲಿ ಬಸವ ಜಯಂತಿಯ ಆಚ
ರಣೆಯಲ್ಲಿ ಭಾಗವಹಿಸಿ ಶರಣ ಸಿದ್ಧಾಂತ ವಿವಿಧ ಮುಖಗಳ ಪರಿಚಯ ಮಾಡಿ
ಕೊಡುತ್ತ ಶ್ರೀಯುತರುಗಳಾದ ಗೊ. ರು, ಚನ್ನಬಸಪ್ಪ, ಪಂಡಿತ ಚನ್ನಪ್ಪ ಎರೇ
ಸೀಮೆ, ಜಿ. ಎಸ್. ಸಿದ್ಧಲಿಂಗಯ್ಯ ಹಾಗೂ ಶಾಸಕಿಯವರಾದ ಶ್ರೀಮತಿ ಲೀಲಾ
ದೇವಿ ರೇಣುಕಾ ಪ್ರಸಾದ್ ರವರು ಕಾರ್ಯಕ್ರಮದ ಯಶಸ್ವಿಗೆ ಸಹಕಾರ ನೀಡಿದರು.

ದಿ. 11. 6. 88 ರಂದು ಪುರುಷನಹಳ್ಳಿಯಲ್ಲಿ ಬಸವ ಜಯಂತಿ ನಡೆದಾಗ
ಗ್ರಾಮಸ್ಥರು ಲಭ್ಯವಾದ ಪವಿತ್ರಾವಕಾಶವನ್ನು ಸವಿಯುವಲ್ಲಿ ಆಸಕ್ತಿ ವಹಿಸಿದ್ದರೆ
ಹೆಚ್ಚು ಪ್ರಯೋಜನವಾಗುತ್ತಿತ್ತು. ಮಾಜಿ ಸಚಿವರಾದ ಸಾಗರನಹಳ್ಳಿ ಶ್ರೀ
ರೇವಣ್ಣ ನವರು ಮಾತನಾಡುತ್ತ ವಿಚಾರವಂತರಾಗದ ಹೊರತು ಸಮಾಜದ ಜನ-
ತೆಗೆ ಉತ್ತಮ ಭವಿಷ್ಯವಿಲ್ಲ, ಕಣ್ಮುಂದೆ ಕಂಗೊಳಿಸುತ್ತಿರುವ ಪರಮಪೂಜ್ಯ ಮಹಾ
ಸ್ವಾಮಿಗಳು ಬಸವತತ್ವಗಳನ್ನು ಆಚರಿಸಿ ತೋರಿಸುತ್ತಿರುವಾಗ ಜನಕುರುಡಾಗ
ಬಾರದು ಅವರ ಹಾದಿಯಲ್ಲಿ ನಡೆದು ಜೀವನ ಸಾರ್ಥಕ ಮಾಡಿಕೊಳ್ಳ ಬೇಕು ಎಂದರು.

ಪಂಡಿತ ಚೆನ್ನಪ್ಪ ಎರೇಸೀಮೆಯವರು ಹಿಂದೂ ಧರ್ಮದ ಉಳಿವಿಗಾಗಿ
ಹೋರಾಟ ಮಾಡಿದ ಮಹಾನುಭಾವ ಬಸವಣ್ಣ ಎನ್ನುತ್ತ ಪುರುಷನಹಳ್ಳಿಗೂ ಶ್ರೀ
ಸಿದ್ಧಗಂಗಾ ಮಠಕ್ಕೂ ಬೆಳೆದು ಬಂದ ಬಾಂಧವ್ಯವನ್ನು ಸ್ಮರಿಸಿಕೊಡು ಆ ಉನ್ನತ

ಪರಂಪರೆಗೆ ಭಂಗ ಬಾರದಂತೆ ಬದುಕುವ ಸದ್ಬುದ್ಧಿಯನ್ನು ಬಸವಾದಿ ಶರಣರು ಕರುಣಿಸಲಿ ಎಂದು ಆಶಿಸಿದರು.

ತಮ್ಮ ಗುರುಗಳಾದ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಕಾರುಣ್ಯ ದೃಷ್ಟಿಗೆ ಒಳಗಾದಪುರುಷನಹಳ್ಳಿ ಸಂಸ್ಕಾರ ಸಂಪನ್ನತೆಯಿಂದ ದೂರವಾಗದಂತೆ ಉಳಿದು ಬರುವಂತಾಗಲಿ ಎಂದು ಪರಮ ಪೂಜ್ಯರು ಆಶೀರ್ವಚನ ನೀಡಿದರು.

ದಿ. 9. 7. 88 ರಂದು ಬಸವ ಜಯಂತಿ ಹರಳೂರು ಗ್ರಾಮದಲ್ಲಿ ನಡೆಯಿತು. ಕನ್ನಡಸಾಹಿತ್ಯ ಪರಿಷತ್ತಿನ ಶ್ರೀ ಟಿ. ಆರ್. ಮಹಾದೇವಯ್ಯನವರು ಮಾತನಾಡುತ್ತ ಬಸವಾದಿ ಶರಣರ ವಚನಗಳ ಅಧ್ಯಯನ ಮಾಡುವ ಅಗತ್ಯತೆಯನ್ನು ಒತ್ತಿಹೇಳಿದರು. ಶ್ರೀ ಚನ್ನಪ್ಪ ಎರೇಸೀಮೆಯವರು ' ಜಂಗಮ ಪ್ರಾಣಿ ಬಸವಣ್ಣ ನನ್ನ ಕುರಿತು ಸ್ವಾರಸ್ಯ ಪೂರ್ಣವಾಗಿ ಪ್ರವಚನ ಮಾಡಿದರು.

ಪರಮ ಪೂಜ್ಯರು ಆಶೀರ್ವಚನ ನೀಡುತ್ತ ಬಸವಣ್ಣನವರ ತತ್ವಗಳನ್ನ ಅನುಸರಿಸುವುದರಿಂದ ಲೋಕ ಕಲ್ಯಾಣ ಸಾಧಿತವಾಗುತ್ತದೆ, ಜೊತೆಗೆ ಆತ್ಮಕಲ್ಯಾಣವೂ ಆಗುತ್ತದೆ. ಲೋಕ ಜೀವನಕ್ಕೆ ಅರ್ಥ ತುಂಬಿದ ಧರ್ಮ ಶರಣಧರ್ಮ, ಅದರ ತಿರುಳು ದುಡಿಮೆ–ದಾಸೋಹ ಮತ್ತು ಪ್ರಸಾದ-ಎಂದರು.

25-7-1988 ರಂದು ತುಮಕೂರು ತಾಲ್ಲೂಕು ಮಾಕನಹಳ್ಳಿ ಪುಣ್ಯಗ್ರಾಮ ಬಸವ ಜಯಂತಿಗೆ ತನ್ನನ್ನು ಅರ್ಪಿಸಿಕೊಂಡಿತು. ಮೇಲಾಗಿ ಅದರ ಸವಿನೆನಪಿಗಾಗಿ ಶ್ರೀ ಸಿದ್ಧಗಂಗಾಮಠದ ಶಾಖಾ ಮಠವನು ಸಂಸ್ಥಾಪಿಸಿತು. ಶರಣ ದಂಪತಿಗಳಾದ ವಿದ್ವಾನ್ ಶ್ರೀ ಎಲ್. ಶಿವಗಂಗ ದೇವರು ಮತ್ತು ಅವರಕುಟುಂಬದವರು ತಮ್ಮ ವಿಶಿಷ್ಟ ಸ್ಥಿರಚರ ಆಸ್ತಿಯನ್ನು ಶ್ರೀ ಶಾಖಾಮಠಕ್ಕೆ ಮುಕ್ತವಾಗಿ ಅರ್ಪಿಸುವುದರ ಮೂಲಕ ಬಸವ ಜಯಂತಿ ಆಚರಣೆಯ ಪರಿಣಾಮಕ್ಕೆ ಜ್ವಲಂತ ಉದಾಹರಣೆಯಾದರು. ಅಂದು ಶ್ರೀ ಸಿದ್ಧಗಂಗಾಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ಮತ್ತು ಮಾಕನಹಳ್ಳಿ ಶಾಖಾ ಮಠಕ್ಕೆ ನಿಯೋಜಿತರಾದ ಪೂಜ್ಯ ಶ್ರೀ ಶ್ರೀ ಗಂಗಾಧರ ಸ್ವಾಮಿಗಳ ಉತ್ಸವವೂ ವೈಭವ ಪೂರ್ಣವಾಗಿ ನಡೆದದ್ದು ಅರ್ಥ ಪೂರ್ಣವಾಗಿತ್ತು. ಇದರ ಜೊತೆಗೆ **ಪರಮ ಪೂಜ್ಯ ಶ್ರೀ ಶ್ರೀ ಗಳವರ ಅಮೃತ ಮಹೋತ್ಸವಾಚರಣೆಯೂ** ಸೇರಿ ಔಚಿತ್ಯ ಪೂರ್ಣವಾಗಿತ್ತು.

ಎಣ್ಣೆ, ಬತ್ತಿ ಇದ್ದರೂ ಗುರುಕೃಪೆದೊರೆಯದೆ ಜ್ಯೋತಿ ಬೆಳಗದು. ಪರಮ ಪೂಜ್ಯರ ಕೃಪಾದೃಷ್ಟಿಯಿಂದ ಗ್ರಾಮೀಣ ಮುಗ್ಧರಾದ ನಾವಿಂದು ಬಸವಾದಿ ಶರ-
ಣರ ಲೋಕೋತ್ತರ ವಿಚಾರಧಾರೆಯನ್ನು ತಿಳಿಯುವಂತಾದುದು ನಮ್ಮ ಭಾಗ್ಯ.
ಅಂಥ ಜ್ಯೋತಿಸದಾ ಬೆಳಗುತ್ತಿರುವಂತೆ ಜಾಗೃತರಾಗಬೇಕಾದುದು ನಮ್ಮ ಕರ್ತವ್ಯ.
ಅದಕ್ಕಾಗಿ ಭಕ್ತಿ ಶ್ರದ್ಧೆಗಳನ್ನು ಬಾಳಿನಲ್ಲಿ ಅರೂಢಿಸಿಕೊಳ್ಳುವ ಪ್ರಯತ್ನ ನಮ್ಮ
ದಾಗಬೇಕು ಎಂದು ಶ್ರೀ ಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧ
ಲಿಂಗ ಸ್ವಾಮಿಗಳವರು ಸಮಾರಂಭವನ್ನು ಉದ್ಘಾಟಿಸುತ್ತ ನುಡಿದರು.



ಬಸವಣ್ಣನವರು ಮಾನವಕಲ್ಯಾಣಕ್ಕಾಗಿ ಹೋರಾಡಿದ ಧೀಮಂತರು. ಅವರು ನಡೆದುಹೋದ ದಿಗಂತದತ್ತ ನಮ್ಮನ್ನು ಕರೆದುಕೊಂಡು ಹೋಗುತ್ತಿದ್ದಾರೆ ಪರಮಪೂಜ್ಯ ಶ್ರೀ ಶ್ರೀ ಗಳು ಎಂದು ಪೂಜ್ಯ ಶ್ರೀ ಶ್ರೀ ಗಂಗಾಧರ ಸ್ವಾಮಿಗಳು ಮಾತ-ನಾಡಿದರು.

' ಮಾತು ಮಹಾದೇವನನ್ನು ಅರಿಯುವ ಸಾಧನವಾಗಬೇಕು ಅಂತಹ ಸಾ-ಧನ ಮಣಿಹವನ್ನು ಕೈಗೊಂಡಿರುವ ಪರಮಪೂಜ್ಯರು ನಾವುಕಂಡಿರುವ ಬಸವಣ್ಣ ಎಂದರು ಶ್ರೀ ಬಿ. ವೀರಭದ್ರಯ್ಯನವರು.

ಪೂಜ್ಯ ಶ್ರೀ ಶ್ರೀಗಳವರ ನಡವಳಿಕೆಯ ಒಗ್ಗೆ ಮಾತನಾಡುವ ನೈತಿಕತೆ ಯಾವ ಸಭೆಗೂ ಇಲ್ಲ ಎಂದು ಶ್ರೀ ಕೆ. ಹೆಚ್ ಪಾಟೀಲರು ಹೇಳಿದುದನ್ನು ಉಲ್ಲೇಖಿಸುತ್ತ ಮಾಜಿಸಚಿವರಾದ ಸಾಗರನಹಳ್ಳಿ ಶ್ರೀ ರೇವಣ್ಣನವರು ಆತ್ಮಶೋಧನೆ ಬಸವತತ್ವದ ಪ್ರಮುಖ ಸಂದೇಶ ಎಂದು ನುಡಿದರು.

ರಟ್ಟೆಯನ್ನು ಮುರಿದು ರೊಟ್ಟೆಯನ್ನುತಿನ್ನುವ ಹವಾಸ ಯುವಜನಾಂಗದಲ್ಲಿ ಬೆಳೆಯಬೇಕು. ಅದಕ್ಕಾಗಿ ಬಸವ ತತ್ವಪ್ರಚಾರ ನಡೆದಿದೆ ಎಂದರು ತುಮಕೂರು ಜಿಲ್ಲಾ ಸಂಖ್ಯಾ ಸಂಯೋಜಕರಾದ ಶ್ರೀ ರೇವಣ್ಣಸಿದ್ಧಯ್ಯನವರು.

ಸ್ತ್ರೀಕುಲದ ಏಳ್ಗೆಗಾಗಿ ಬಸವಣ್ಣನವರು ಮಾಡಿದ ಮಹೋಪಕಾರವನ್ನು ಸ್ಮರಿಸುತ್ತ ಶರಣಸಂದೇಶವೇ ನಮಗೆ ದಾರಿದೀಪ ಎಂದರು ಶ್ರೀಮತಿ ಬಿ. ಗಂಗಾಂಬಿಕೆ.

ಬಸವೇಶ್ವರರ ಅವತಾರ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸಾಮಿಗಳು ನನಗಿಷ್ಟೇ ತಿಳಿದಿರುವುದು ಎಂದವರು ಮಾಜಿಶಾಸಕರಾದ ಶ್ರೀ ಗಂಗಾಭೋವಿಯವರು.

ಬಸವ ಜಯಂತಿ ಕರ್ನಾಟಕದ ಪ್ರತಿಹಳ್ಳಿಯಲ್ಲಿಯೂ ನಡೆಯುವಂತಾಗಬೇಕು ಎಂದು ಗಳಿಗೇನಹಳ್ಳಿ ಮಂಡಲ ಪ್ರಧಾನರಾದ ಶ್ರೀರಾಜಶೇಖರ್ ನುಡಿದರೆ ಉಪ ಪ್ರಧಾನರಾದ ಶ್ರೀಗುರು ಅವರು ಯುವಜನರನ್ನು ತಪ್ಪು ದಾರಿಗಳೆಯುತ್ತಿರುವ ಮುರ್ಖರ ಸಣ್ಣತನವನ್ನು ಖಂಡ ತುಂಡವಾಗಿ ಖಂಡಿಸಿದರು.

ಬಸವಣ್ಣ ಮನುಕಲದ ಭೂಷಣಸ್ವರೂಪರು, ಅಷ್ಟೆ ಅಲ್ಲ ಮನುಕುಲದ ಹೃದಯ
ಅವರು. ಧರ್ಮತತ್ವಗಳನ್ನು ಬಡಗುಡಿಸಿಲಿಗೂ ತೆಗೆದುಕೊಂಡುಹೋದರು. ವ್ಯಕ್ತಿ
ವ್ಯಕ್ತಿಗೂ ಮುಟ್ಟಿಸಿದರು. ಅವಗುಣಗಳನ್ನು ನಿವಾರಿಸಿಧರು, ಸದ್ಗುಣಗಳನ್ನು ಬಿತ್ತಿ
ಬೆಳೆದರು' ಅವರಿಂದ ನಾಡು ಜೀವಂತವಾಯಿತು, ಯುಗ ಉಸಿರಾಡಿತು. ಎನ್ನುತ್ತ
ಮುಂದುವರಿದು ಶ್ರೀಮಠದ ಪ್ರಕರಣವನ್ನು ಪ್ರಸ್ತಾಪಿಸುತ್ತಾ "ಒಬ್ಬ ಗೃಹಸ್ಥ ತಪ್ಪು
ಮಾಡಿದರೆ ಅದರ ಫಲವನ್ನು ಅವನಕುಟುಂಬದವಡು ಅನುಭವಿಸ ಬೇಕಾಗುತ್ತದೆ.
ಆದರೆ ಒಬ್ಬ ಸ್ವಾಮಿ ತಪ್ಪುಮಾಡಿದರೆ ಅದರ ಫಲವನ್ನು ಸಮಾಜ ಅನುಭವಿಸ
ಬೇಕಾಗುತ್ತದೆ „ ವೋಟು (vote) ಕೊಟ್ಟು ಗುರುವನ್ನು ಮಾಡುವುದಕ್ಕೆ ಬರು
ವುದಿಲ್ಲ; ಗುರುಮುಟ್ಟಿ ಗುರುವಾಗಬೇಕು–ಎಂದು ಆಶೀರ್ವಚನ ನೀಡಿದರು ಅಧ್ಯಕ್ಷ
ಪೀಠದಿಂದ ಪರಮ ಪೂಜ್ಯ ಶ್ರೀ ಶ್ರೀಗಳು. ಜಯಂತಿ ನಡೆದ ಕಡೆಗಳಲ್ಲಿ „ಬಸವೇಶ್ವರ
ನಾಟಕ„ ನಡೆದದ್ದು ವಿಶೇಷ ಕಾರ್ಯಕ್ರಮವಾಗಿರುತ್ತಿತ್ತು. ತತ್ವಪ್ರಚಾರಕ್ಕೆ ನಾಟಕ
ಮಾಧ್ಯಮ ಅತ್ಯಂತಸೂಕ್ತ ವೆಂಬುದನ್ನು ವಿಚಾರ ಶೀಲನಾದ ನೀವು ಒಪ್ಪುತ್ತೀರವೆ ?

# ಹೈ ಕೋರ್ಟಿನಲ್ಲಿ ತಡೆ ಬೇಡಿಕೆ ವಜಾ

ಸಿದ್ಧಗಂಗಾ ಮಠದಿಂದ ತಮ್ಮನ್ನು ಹೊರ ಹಾಕದಂತೆ ಕಾಯಂ ತಡೆ- ಕೋರಿ ಸಲ್ಲಿಸಲ್ಲಾಗಿದ್ದ ಮೇಲ್ಮನವಿಯನ್ನು ರಾಜ್ಯ ಹೈಕೋರ್ಟ್ ತಾ-31-3-89 ರಂದು ವಜಾಮಾಡಿತ್ತು.

ತುಮಕೂರಿನ ಸಿವಿಲ್ ನ್ಯಾಯಲಯದಲ್ಲಿ ಈ ಹಿಂದೆ ಕಾಯಂ ತಡೆ- ಕೇಳಿ ಸಲ್ಲಿಸಲಾಗಿದ್ದ ಮನವಿಯನ್ನು ಅಲ್ಲಿನ ಪ್ರಧಾನ ಸಿವೀಲ್ ನ್ಯಾಯಧೀಶರು ತಾ-6-1-89ರಂದು ತೀರ್ಪು ನೀಡಿ ಶ್ರೀ ಗೌರಿಶಂಕರ ಸ್ವಾಮಿ ಸಲ್ಲಿಸಿದ ಅರ್ಜಿ ಯನ್ನು ವಜಾಮಾಡಿದರು.

ಈ ವಜಾಮಾಡಿದ ತೀರ್ಪಿನ ಕ್ರಮ ಬದ್ಧತೆಯನ್ನು ಪ್ರಶ್ನಿಸಿ ಶ್ರೀ ಗೌರಿ- ಶಂಕರಸ್ವಾಮಿ ಇವರು ರಾಜ್ಯದ ಹೈಕೋರ್ಟ್‌ನಲ್ಲಿ ಅಪೀಲ್ ಸಲ್ಲಿಸಿ ಕೆಳ- ಕೋರ್ಟಿನ ತೀರ್ಪನ್ನು ವಜಾ ಮಾಡಿ ತಾವು ಮಠದಲ್ಲಿ ಉಳಿಯಲು ಅವಕಾಶ ಕಲ್ಪಿಸಿಕೊಂಡುವಂತೆ ಅದೇಶ ನೀಡಬೇಕೆಂದು ಕೇಳಿ ಕೊಂಡಿದ್ದರು

ಈ ಖಟ್ಲೆಯ ವಿಚಾರಣೆ ನಡೆಸಿದ ನ್ಯಾಯ ಮೂರ್ತಿಗಳಾದ ಶ್ರೀ ಪಿ. ಕೆ. ಶ್ಯಾಮಸುಂದರ್‌ರವರು ತಾ-31-3-89ರಂದು ಮೇಲ್ಮನವಿಯನ್ನು ವಜಾ ಮಾಡಿ ಇಂತಹ **ಪರಿಹಾರ ಪಡೆಯಬೇಕಾದರೆ ಮೇಲ್ಮನವಿ ಸಲ್ಲಿಸಿ ರುವ ವ್ಯಕ್ತಿಯ ಕೀರ್ತಿ ಮತ್ತು ಹಸ್ತ ಎರಡು ಪರಿಶುದ್ಧವಾಗಿರಬೇಕು.** ಎಂದು ತಿಳಿಸಿದ್ದಾರೆ.

ಮೇಲ್ಮನವಿದಾರರ ಮೇಲೆ ಪೋಲೀಸರು ಕ್ರಿಮಿನಲ್ ಆರೋಪದ ಮೊಕದ್ದಮೆ ಹೂಡಿದ್ದು ಅದರ ಸತ್ಯಾಸತ್ಯತೆಯು ಹೊರ ಬೀಳ ಬೇಕಾಗಿದೆ. ಈ ಪರಿಸ್ಥಿತಿಯಲ್ಲಿ ತಡೆ ನಿರಾಕರಿಸಿದ ಕೆಳ ಕೋರ್ಟ್‌ನ ಆಜ್ಞೆಯನ್ನು ಕಾಯಂ ಗೊಳಿಸಬೇಕಾಗುತ್ತದೆ ಎಂದು ನ್ಯಾಯ ಮೂರ್ತಿಗಳು ಅಭಿಪ್ರಾಯ ಪಟ್ಟಿದ್ದಾರೆ.

ಆದ್ದರಿಂದ ಕೆಳ ಕೋರ್ಟ್‌ನ ತೀರ್ಪನ್ನು ಕಾಯಂ ಗೊಳಿಸಿ ಮೇಲ್ಮನವಿಯನ್ನು ವಜಾ ಮಾಡಿರುವುದಾಗಿ ನ್ಯಾಯ ಮೂರ್ತಿಗಳು ತೀರ್ಪಿನಲ್ಲಿ ಹೇಳಿದ್ದಾರೆ.



**ಮಾಣಿಕ್ಯ ದೀಪ್ತಿ** (10 ನೇ ಪುಟದಿಂದ ಮುಂದುವರಿದಿದೆ)

ಪ್ರಾಚೀನ ಗುರುಕುಲಗಳ ದಿವ್ಯಾದರ್ಶನದ ನೆಲಗಟ್ಟಿನ ಮೇಲೆ ಸಂಸ್ಥೆಯನ್ನು ಕಟ್ಟಿ ಬೆಳೆಸಿ, ಸಹಸ್ರ ಸಹಸ್ರ ಸಂಖ್ಯೆಯ ಬಡಮಕ್ಕಳನ್ನು ಅಲ್ಲಿ ಬರಮಾಡಿಕೊಂಡು ಅವರ ಹೊಟ್ಟೆ-ನೆತ್ತಿಗಳನ್ನು ನೋಡಿಕೊಂಡು ರಾಷ್ಟ್ರದ ಮುಂದಿನ ಪ್ರಜೆಗಳನ್ನಾಗಿ ರೂಪಿಸಲು ಸಂಕಲ್ಪಸಿದ ರೂವಾರಿ ಅವರು. ಅದೇ ಸದ್ಭಾವನೆಯಿಂದಲೇ ಕಳೆದ ಹಲವು ದಶಕಗಳಿಂದ ಅಹನಿಶಿ ದುಡಿದು ಲಕ್ಷಾಂತರ ವಿದ್ಯಾರ್ಥಿಗಳನ್ನು ಯಾವ ತಾರ ತಮ್ಯವೂ ಇಲ್ಲದೆ ರೂಪಿಸಿ ಕಳಿಸಿದವರು !

ಯಾವ ಕೆಟ್ಟ ಕಾರಣದಿಂದಲೋ ಬದಲಾದ ಸಾಮಾಜಿಕ ಪರಿಸ್ಥಿತಿಗಳಿಂದಾಗಿ ಈ ಆದರ್ಶದ ರೀತಿ ನೀತಿಗಳಿಗೆ ಒಗ್ಗದ ಸಗ್ಗದ ಪ್ರವೃತ್ತಿ ಜನರಲ್ಲಿ, ಅದರಲ್ಲೂ ಯುವ ಪೀಳಿಗೆಯಲ್ಲಿ ಬೆಳೆಯುತ್ತಿರುವುದನ್ನು ಕಂಡ ಅವರಿಗೆ ಅಪಾರ ಮನೋವೇದನೆ. ದೂರದೃಷ್ಟಿಯುಳ್ಳ ಅವರಿಗೆ ದೇಶದ ಮುಂದಿನ ಚಿತ್ರ ಘೋರವಾಗಿ ಕಾಣುತ್ತದೆ. ಅದು ಸುಮುಖವಾಗಬೇಕು. ಜನರೆಲ್ಲರಿಗೂ ಕಲ್ಯಾಣವಾಗಬೇಕೆಂಬ ತುಡಿತ ಅವ ರದು. ಆದ್ದರಿಂದಲೇ ಅವರು ನೊಂದು ನುಡಿಯುತ್ತಾರೆ, ಕನಲಿಗರ್ಜಿಸುತ್ತಾರೆ; ಅನುನಯದಲ್ಲಿ ತಿಳಿಹೇಳುತ್ತಾರೆ.

ಹಿಂದೊಮ್ಮೆ ಅವರು ಎಲ್ಲೆಲ್ಲೂ ಭ್ರಷ್ಟತೆ, ನೀಚತನ ಹೆಚ್ಚುತ್ತಿರುವುದರ ಬಗ್ಗೆ ಪ್ರಸ್ತಾಪಿಸುತ್ತಾ ಈ ಕೆಟ್ಟರೋಗ ಪತ್ತೆಮಾಡಲಾಗದಷ್ಟು ಬೆರೆತುಹೋಗಿದೆ, ಹಾಗೆ ಬದುಕಲಾಗದ್ದು ಅದು ಬದುಕೇಅಲ್ಲ ಎನ್ನುವಷ್ಟರ ಮಟ್ಟಿಗೆ ಆಗಿದೆ: Correption has become a way of life; ಈ ಮಾತನ್ನು ಅವರ ಹೇಳಿದ್ದು 15- ವರ್ಷಗಳ ಹಿಂದೆ ಈಗ ? ಇಂದು ಅನೇಕರಿಗೆ ಸ್ವಾರ್ಥದ ಮುಂದೆ ಏನೂ ಕಾಣಿ ಸುವುದಿಲ್ಲ. ದೇಶದ ಮಾತಿರಲಿ, ತನ್ನ ಅಕ್ಕ ಪಕ್ಕ ವಾಸಮಾಡುವ ಸಹಜೀವಿಗಳ ಬಗ್ಗೆ ಕೂಡ ಸಲ್ಪವೂ ಕಾಳಜಿಯಿಲ್ಲ. ತಾನು ಬಹುಬೇಗ ಸಿರಿವಂತ ನಾಗಬೇಕು; ಐಷಾರಮುವಾಗಿ ಬಾಳು ಸಾಗಿಸಬೇಕು. ಇದಕ್ಕೆ ಆತ ಅನುಸರಿಸುವುದು ವಕ್ರಮಾರ್ಗ. ಏಕೆಂದರೆ ಋಜುಮಾರ್ಗದಲ್ಲಿ ಫಲಸಿಧಾನ, ಶ್ರಮಹೆಚ್ಚು ಎಂಬ ಈ ತಪ್ಪು ಲೆಕ್ಕಾ ಚಾರದಿಂದ ಆತ ಎಡವುತ್ತಾನೆ. ಮುಗ್ಗರಿಸಿ ಬಿದ್ದಾಗ ಎಚ್ಚತ್ತಾನು! ಆದರೆ ಅಲ್ಲಿಯ ವರೆಗೆ 'ಕಾಲ' ಕಾಯಬೇಕಲ್ಲ ? ತನಗೆ ಸಾವಿರವರ್ಷ ಆಯುಸ್ಸಿದ್ದಿದ್ದರೆ ಪ್ರಯೋಗ ಮಾಡುತ್ತ ಹೋಗಬಹುದಿತ್ತೇನೋ ! ಆದರೆ ಯಾವ ಕ್ಷಣದಲ್ಲಿ ಹಾರಿ ಹೋಗುವ- ದಾಗಿ ಪ್ರಾಣ ದೀಪ. ಅದಕ್ಕೆ ಮುಂಚೆ ಮಾಡಬಹುದಾದ ಒಳ್ಳೆತನ್ನೆಸಗಿ ಜನ್ಮ ಸಾರ್ಥಕ ಪಡಿಸಿಕೊಳ್ಳಬೇಡವೆ ?.......

ಇಂಥ ಹತ್ತಾರು ವಿಚಾರ ವೀಚಿಗಳು ಪೂಜ್ಯರ ಚಿಕ್ಕದಾದರೂ ಚೊಕ್ಕದಾದ ಅಂತಃ ಕರಣವನ್ನು ಕಲಕುವ, ಅನುಭವಕ್ಕೆ ಮೊಟುಗೋಲಾಗುವ ಮಾತುಗಳಿಂದ ಮೂಡುವಂತ್ತಿದ್ದವು. ನನ್ನ ಹೃದಯದಲ್ಲಿ ಈ ಬಗೆಯ ಸದ್ಭಾವನೆಗಳನ್ನು ಮೂಡಿ ಸಿದ ಪೂಜ್ಯರ ಶ್ರೀ ಪಾದಕ್ಕೆ ನಮೋ ಎನ್ನುತ್ತೇನೆ.

## ಪರಮ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ನೇತೃತ್ವ

ದಿನಾಂಕ : 13-2-89 ರಂದು ಶ್ರೀ ಕ್ಷೇತ್ರದಲ್ಲಿ ನಡೆದ 72 ನೇ ಸಂಸ್ಕೃತೋತ್ಸವ ಆಚರಣೆ ರಾಜ್ಯಪಾಲರಾದ ಶ್ರೀ ವೆಂಕಟಸುಬ್ಬಯ್ಯ ಅವರಿಂದ ಉದ್ಘಾಟನೆ, ಸಮಾರಂಭದಲ್ಲಿ ವಿ|| ಪ್ರೊ|| ಕೆ. ಟಿ. ಪಾಂಡುರಂಗಿ ನಿವೃತ್ತ ಪ್ರಾಧ್ಯಾಪಕರು ವಿ|| ಶ್ರೀ ಎಂ. ಎನ್. ಲಕ್ಷ್ಮೀನರಸಿಂಹಭಟ್ಟರು (ಅಲಂಕಾರಶಾಸ್ತ್ರ) ವಿ|| ಶ್ರೀ ಜಿ. ಮಹಾಬಲೇಶ್ವರ ಭಟ್ಟ, ಬೆಂಗಳೂರು (ವ್ಯಾಕರಣಶಾಸ್ತ್ರ), ವಿ|| ಶ್ರೀ ಬಿ. ರಾಮಚಂದ್ರರಾವ್ (ತರ್ಕಶಾಸ್ತ್ರ) ಮತ್ತು ವಿ|| ಶ್ರೀ ಶೇಷಾಚಲಶರ್ಮ, ಬೆಂಗಳೂರು ಇವರುಗಳು ಭಾಗವಹಿಸಿ, ಶಾಸ್ತ್ರಗೋಷ್ಠಿಯನ್ನು ನಡೆಸಿದರು.

ದಿನಾಂಕ 22-2-89 ರಂದು ಶ್ರೀ ಕ್ಷೇತ್ರದಲ್ಲಿ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಪ್ರಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ನೇತೃತ್ವ. ರಾಜ್ಯದ ವಿದ್ಯುತ್ ಸಚಿವ ಶ್ರೀ ಜೆ. ಹೆಚ್. ಪಟೇಲ್‌ರವರ ಉದ್ಘಾಟನೆ, ಮಾಜಿ ಸಚಿವರಾದ ಶ್ರೀ ಲಕ್ಷ್ಮೀನರಸಿಂಹಯ್ಯ ಅವರ ಅಧ್ಯಕ್ಷತೆ, ಮುಖ್ಯ ಅತಿಥಿಗಳಾಗಿ ಜಿಲ್ಲಾ ಪರಿಷತ್ ಅಧ್ಯಕ್ಷ ಶ್ರೀ ಹೆಚ್. ನಿಂಗಯ್ಯ ಅವರುಗಳು ಭಾಗವಹಿಸಿದ್ದರು.

ದಿನಾಂಕ 1-3-89 ರಂದು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯಲ್ಲಿ ಉತ್ತಮರಾಸುಗಳಿಗೆ ಬಹುಮಾನ ವಿತರಣೆ ಸಮಾರಂಭ. ಕ. ರಾ. ಹಾಲು ಉತ್ಪಾದಕ ಮಹಾಮಂಡಳದ ಅಧ್ಯಕ್ಷ ಜೆ. ಸಿ. ಮಾಧುಸ್ವಾಮಿ ಅವರಿಂದ ಬಹುಮಾನ ವಿತರಣೆ. ಅಧ್ಯಕ್ಷತೆ ಮಾಜಿ ಸಚಿವರಾದ ಶ್ರೀ ಲಕ್ಷ್ಮೀನರಸಿಂಹಯ್ಯ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ದಿವ್ಯ ನೇತೃತ್ವ ವಹಿಸಿದ್ದರು. ಕ್ಯಾಪ್ಟನ್ ಡಾ|| ರಾಮು ಮತ್ತು ಡಾ|| ಪ್ರಭುದೇವ್ ಉತ್ತಮ ರಾಸುಗಳನ್ನು ಆಯ್ಕೆ ಮಾಡಿದರು.

ದಿನಾಂಕ 3-3-89 ರಂದು ಶ್ರೀ ಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯವರ ಬೆಳ್ಳಿಪಾಲಕಿಯನ್ನು ದಾನಿಗಳಾದ ಶ್ರೀ ಟಿ. ಕೆ. ನಂಜುಂಡಪ್ಪನವರು ನಡೆಸಿಕೊಟ್ಟರು. ಸಹಸ್ರಾರು ಭಕ್ತಾದಿಗಳು ನೆರೆದಿದ್ದು ಭಕ್ತಿ ನಮನಗಳನ್ನು ಅರ್ಪಿಸಿದರು.

ದಿನಾಂಕ 7-3-89 ರಂದು ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ರಥೋತ್ಸವದ ಧಾರ್ಮಿಕ ಸಂಪ್ರದಾಯಗಳಿಗನುಸಾರವಾಗಿ ಜರುಗಿತು. ಪರಮ ಪೂಜ್ಯರು ಶ್ರೀ ರಥವನ್ನು ತಮ್ಮ ಅಮೃತ ಹಸ್ತದಿಂದ ಎಳೆದು ಉತ್ಸವ ಪ್ರಾರಂಭ ಮಾಡಿದರು. ಲಕ್ಷಾಂತರ ಭಕ್ತಾದಿಗಳು ತಮ್ಮ ತಮ್ಮ ಭಕ್ತಿ ನಮನಗಳನ್ನು ಸಲ್ಲಿಸಿದರು.



## ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ "ಆಜೀವ ಸದಸ್ಯತ್ವದ" ಪಟ್ಟಿ.

ಸರ್ವಶ್ರೀ :-

331 ಎ. ಎಸ್. ಸದಾಶಿವಯ್ಯ, ಉಪನ್ಯಾಸಕರು. ಎಸ್. ಎಸ್. ಎ ಸಿ. ಕಾಲೇಜ್, ತುಮಕೂರು.

332 ಶಿವಣ್ಣ, ಉಪಾಧ್ಯಾಯರು, ಕುರುಡಿ ಮತ್ತು ಅಂಚೆ. ಗೌರಿಬಿದ್ದನೂರು ತಾಲ್ಲೂಕ್, ಕೋಲಾರ ಜಿಲ್ಲಾ

333 ಪುಟ್ಟನರಸಯ್ಯ, ಬಿ. ಎ., ಉಪಾಧ್ಯಾಯರು, ಬೈಚೇನಹಳ್ಳಿ, ಇರಕಸಂದ್ರ ಕಾಲೊನಿ ಅಂಚೆ, ಕೊರಟಗೆರೆ ತಾಲ್ಲೂಕ್ ತುಮಕೂರು ಜಿಲ್ಲಾ

334 ಟಿ. ಬಸವರಾಜು, ನಂ. 4. 3 ನೇ ವಿಭಾಗ, ಕೆ. ಹೆಚ್. ಬಿ. ಕ್ವಾಟರಸ್, ಜಯನಗರ, ಬೆಂಗಳೂರು-560011

335 ಎಂ. ಜಿ. ಮಹೇಶ್ವರಯ್ಯ, ಅಧೀಕ್ಷಕರು ಸರ್ಕಾರಿ T.T.I. ಬುಕ್ಕಾಪಟ್ಟಣ ಮತ್ತು ಅಂಚೆ, ತುಮಕೂರು

336 ಸಿ.ಎಸ್. ದೇವರಾಜು S/o ಜಿ. ಸಿದ್ದರಾಮಯ್ಯ, ಚಿಕ್ಕನಾರವಂಗಲ ದೊಡ್ಡನಾರವಂಗಲ ಅಂಚೆ. ತುಮಕೂರು ಜಿಲ್ಲಾ

337 ಎಂ. ಸುಬ್ಬರಾಯ ಸಹಾಯಕ ಕೃಷಿ ನಿರ್ದೇಶಕರು ನಂ. 273/1 ಎಂ ಜಿ. ರಸ್ತೆ ಚಿಕ್ಕಬಳ್ಳಾಪುರಂ ಪೇಟೆ.

338 ಗೋವಿಂದಯ್ಯ, ಕೆ. ಇ. ಬಿ. ಸಹಾಯಕರು ತುಮಕೂರು

339 ಎಸ್. ವಿ. ಸದಾಶಿವಯ್ಯ, ಮುಖ್ಯೋಪಾಧ್ಯಾಯರು, ಜಿ. ಪಿ. ಬಿ. ಸ್ಕೂಲ್, ಅಗಲಹಟ್ಟಿ, ಕ್ಯಾಮನಹಳ್ಳಿ ಅಂಚೆ ಸಕಲೇಶಪುರ ತಾಲ್ಲೂಕ್ ಹಾಸನ ಜಿಲ್ಲಾ

340 ಕೆ. ಸಿ. ಸೋಮಶೇಖರ, ಕೆಲಕೂರು ಮಠ, ಗರಗಂದೂರು ಅಂಚೆ ಮಾದಪುರ, ದಕ್ಷಿಣ ಕನ್ನಡ ಜಿಲ್ಲೆ

341 ಪಿ. ನಂದಪ್ಪ, ಮುಖ್ಯೋಪಾಧ್ಯಾಯರು, ಎಸ್. ಎಸ್. ಆರ್. ಎಮ್. ಎಸ್. ಸಿದ್ದಗಂಗಾಮಠ

ಸ್ಥಾಪನೆ : 1915 ತಂತಿ : "ಹ್ಯಾಪಿಮೂನ್"

## ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ
- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ

ತಯಾರಕರು




ಶಿವಪೂಜಾ
ಸಾಮಗ್ರಿಗಳು ದೊರೆಯುತ್ತದೆ.




ಫೋನ್ : ಅಂಗಡಿ — 28009 ಮನೆ — 224623.

ವೈ. ಬಸಪ್ಪ, 206, ಅವೆನ್ಯೂ ರೋಡ್, ಬೆಂಗಳೂರು-560 002